


ದಶವರ್ಷ ಸಂಭ್ರಮದ ಪುಸ್ತಕಮಾಲಿಕೆ 2022

# ಗೂಡೆ ಬೇಕಾಗುಟ್ಟು

## ನಾಟಕಗಳ ಜೊಂಗೆ

ಪಿ.ಜಿ. ಅಂಬೆಕಲ್



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

Decennial Year Publication Series 2022

**ಗೂಡೆ ಬೇಕಾಗುಟ್ಟು ಮತ್ತೆ ಇತರೆ ನಾಟಕಗಳ ಜೊಂಗೆ**
**Goode Bekaguttu Matte Itare Natakagala Jonge**
Collection of Dramas
by
**P. G. Ambekal**
#A 315, Ortus-2, Near Shree Lakshminarayana Temple
Amrutha Halli, Bengaluru - 560 092
Mobile: 9481390089

**ಸಲಹಾ ಸಮಿತಿ :**
ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀಮತಿ ಸ್ಮಿತಾ ಅಮೃತರಾಜ್
ಡಾ. ವಿಶ್ವನಾಥ ಬದಿಕಾನ
ಶ್ರೀ ಭರತೇಶ ಅಲಸಂಡೆಮಜಲು

ಪ್ರಕಟಣೆ :
**ರಿಜಿಸ್ಟ್ರಾರ್**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಪುಸ್ತಕ ದೊರೆಯುವ ಸ್ಥಳ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಕಾಫಿಕೃಪ ಬಿಲ್ಡಿಂಗ್, ರಾಜಸೀಟ್ ರಸ್ತೆ, ಮಡಿಕೇರಿ
ದೂ: 08272–223055, ಮೊ : 6362522677
arebaseacademy@gmail.com, www.arebasheacademy.gov.in

ಪ್ರಕಟಣೆಯ ವರ್ಷ : 2022

ಆಕಾರ : ಕ್ರೌನ್ 1/8 ಕಾಗದ : 80 ಜಿಎಸ್ಎಂ ಮ್ಯಾಪ್ಲಿತೋ
ಪುಟಗಳು : 100 ಬೆಲೆ : ರೂ. 100
ಪ್ರತಿಗಳು : 100

ಮುಖಪುಟ ವಿನ್ಯಾಸ : **ಕಲ್ಲೂರು ನಾಗೇಶ**

ಪುಟವಿನ್ಯಾಸ ಮತ್ತು ಮುದ್ರಣ
**ಆಕೃತಿ ಪ್ರಿಂಟ್ಸ್**
ಲೈಟ್‌ಹೌಸ್ ಹಿಲ್ ರಸ್ತೆ, ಮಂಗಳೂರು – 575 001
ದೂ: 0824 2972002

# ಅಧ್ಯಕ್ಷರ ಮಾತ್

ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಪುಸ್ತಕ ಪ್ರಕಟಣಾ ಯೋಜನೆ ಅಡಿಲಿ ಪಿ.ಜಿ. ಅಂಬೆಕಲ್ ಅವರ 'ನಾಟಕಗಳ ಜೊಂಗೆ' ಹೊರ ಬಾತಿರ್‌ದು ಕುಸಿನ ಸಂಗತಿ.

ನಿವೃತ್ತ ಶಿಕ್ಷಕರಾಗಿರ್‌ವ ಲೇಕಕರ್, ತಮ್ಮ ವೃತ್ತಿಜೀವನದ ಹೊತ್ತುಲಿ ಮಕ್ಕಳಿಗೆ ಸಾಹಿತ್ಯದ ಬೀಜ ಬಿತ್ತಿದವು. ಇಲ್ಲಿಯ ನಾಟಕಗಳ್‌ನ ಅವು ತಮ್ಮ ಮಕ್ಕಳಿಗೆ ಆಡಿ ತೋರ್ಸಿಕೆ ಪ್ರಯತ್ನ ಪಟ್ಟವು. ಇಂದ್ ಆ ನಾಟಕಗ ಎಲ್ಲಾ ಅರೆಬಾಸೆಗೆ ಬಾತಿರ್ದು ಒಳ್ಳೆಯ ಸಂಗತಿ. ಯಾಕೆ ತೇಳಿರೆ ಅರೆಬಾಸೆಲಿ ರಂಗಬೂಮಿ ಚಟುವಟಿಕೆ ತುಂಬಾ ಕಡಿಮೆ. ಅಂತಹ ಹೊತ್ತುಲಿ ಇಂತಹ ಪ್ರಯತ್ನಗ ನಮ್ಮ ಅರೆಬಾಸೆಗೆ ಒಂದು ಗಟ್ಟಿಯಾದ ಸಾಂಸ್ಕೃತಿಕ ಅಡಿಪಾಯ ಕಟ್ಟಿಕೊಡುವಲ್ಲಿ ಸಾಕಾರಿಯಾದೆ ತೇಳಿ ನಾವು ಗ್ರೇಸುವೆ.

ಈ ನಾಟಕಗಳ ನಮ್ಮ ಮಕ್ಕ ಓದೋಕು, ತಮ್ಮ ಶಾಲಾ ಕಾಲೇಜು ಸಮಾರಂಬಗಳ್‌ಲಿ ಆಡಿ ತೋರಿಸೋಕು. ಹಂಗಾಕನ ಅರೆಬಾಸೆಲಿ ರಂಗಚಟುವಟಿಕೆಗಳಿಗೆ ಒಂದು ಬಿರ್ಸಿನ ಚಾಲನೆ ಸಿಕ್ಕಂಗೆ ಆದೆ. ಒಂದು ಬಾಸೆ ಬೆಳೆಯೋಕು, ವಿಸ್ತರಣೆ ಆಕು ತೇಳಿರೆ ಇಂತಹ ಪ್ರಯತ್ನಗ ತುಂಬ ಅಗತ್ಯ. ಈ ಪ್ರಯತ್ನಕ್ಕೆ ಕೈ ಹಾಕಿದ ಹಿರಿಯರಾದ ಸಾಹಿತಿ ಪಿ.ಜಿ. ಅಂಬೆಕಲ್‌ನವುಕೆ ಅಬಿನಂದನೆಗ.

2–7–2022 **ಲಕ್ಷ್ಮೀನಾರಾಯಣ ಕಜೆಗದ್ದೆ**

## ಲೇಖಕರ ಮಾತ್

# ನನ್ನ ನಾಟಕದ ಪ್ರೀತಿ...!!!

ನಮ್ಮ ಮನೆ ಮಾತ್ ಅರೆಬಾಸೆನ ಮೇಲೆನ ಪ್ರೀತಿಂದ ಸುಮಾರ್ ಐವತ್ತೆರ್ಡ್ ವರ್ಸಗಳ ಹಿಂದೆ ನಾ ಬರ್ದ 'ನಮ್ಮ ಬಾಸೆ'ಂತ ಹೇಳ್ವ ಲೇಖನಕ್ಕೆ ಸರೂನ ಅರೆಬಾಸೆ ಗದ್ಯ ಬರಂತ ಹೇಳ್ವ ಹೆಗ್ಗಳ್ಕೆ ಸಿಕ್ಕಿತ್. ಆಮೇಲೆ ಅವಕಾಸ ಸಿಕ್ಕ್‌ಕನೆಲ್ಲಾ ಅರೆಬಾಸೆಲಿ ಲೇಕನ, ಕತೆಗಳ ಬರ್ಕಂಡ್ ಇದ್ದವಂಗೆ ಅರೆಬಾಸೆಲಿ ನಾಟಕ ಯಾಕೆ ಬರಿಯಕೆ ಆಗದ್‌ಂತ ಅನ್ಸಿತ್. ಆಗ ನಾ ಸಾಲೆಲಿ ಮಕ್ಕಳಿಗೆ ಮಾಡ್ಸ್‌ತ್ತಿದ್ದ ಕನ್ನಡ, ತುಳು ನಾಟಕಗಳ ಗೇನ ಬಾತ್, ಅದರ್‌ನೇ ಅರೆಬಾಸೆಗೆ ತರ್ಜುಮೆ ಮಾಡಿಕೆ ಸುರುಮಾಡ್ದೆ. ಸಾಲೆಲಿ ಹೆಚ್ಚಿನ ಮಕ್ಕ ಪಾಲ್ಗೊಳ್ಳಿಕೆ ಬೇಕಾಗಿ ಸಣ್ಣ ಸಣ್ಣ ನಾಟಕಗಳ ಮಾಡ್ಸ್‌ತ್ತಿದ್ದೆ. ಅದಕ್ಕೆ ಬೇಕಾದ ಕತೆಗಳ ಪುರಾಣ, ಚರಿತ್ರೆ, ಹಳೆಗನ್ನಡ ಪಾಟಗಳ್‌ಂದ ತಕಂಡ್ ನಾಟಕ ರೂಪಕ್ಕೆ ತಂದೆ. ಇದರೊಟ್ಟಿಗೆ ಈಗನ ಕಾಲಕ್ಕೆ ಸೆರಿಯಾಗಿ 'ಗೂಡೆ ಬೇಕಾಗುಟ್ಟು'ಂತ ಹೇಳುವ ನಾಟಕನೂ ಬರ್ದೆ. ಅಂತೂ ಒಂದು ನಾಟಕಗಳ ಜೊಂಗೆ ಆತ್.

ನಂಗೆ ನಾಟಕಗಳ ರುಚಿ ಹತ್ತಿಸಿದವು ನನ್ನ ಪೂಜ್ಯ ಗುರುಗಾದ ದಿ. ವಿದ್ವಾನ್ ಟಿ.ಜಿ. ಮುಡೂರು ಇವು. ಸಾಲೆನ ವಾರ್ಷಿಕೋತ್ಸವಕ್ಕೆ ಅವೇ ಬರ್ದ್ ನಿರ್ದೇಶಿಸಿದ

‘ಇನ್ನೂರ್ ಅಳಿಯ’ ನಾಟಕಲಿ ನಂಗೊಂದು ಪಾರ್ಟ್ ಕೊಟ್ಟಿದ್ದೊ. 10ನೇ ಕ್ಲಾಸ್ಲಿ ಇರ್‌ಕನ ‘ವೀರ ಅಭಿಮನ್ಯು’ ಯಕ್ಷಗಾನಲಿ ಸುಬದ್ರೆಯಾಗಿ ಅಬಿನಯಿಸಿದ್ದೆ. ನಾ ವಿಟ್ಲ ಸೇರ್ದ ಮೇಲೆ ಅಲ್ಲಿ ಸಾಲಾ ವಾರ್ಷಿಕೋತ್ಸವದೊಟ್ಟಿಗೆ ಹಳೆ ವಿದ್ಯಾರ್ತಿಗಳ, ವಿದ್ಯಾರ್ತಿ ನಿಲಯದ ವಾರ್ಷಿಕೋತ್ಸವಂತ ಮೂರು ಮೂರು ದಿನ ನಾಟಕಗಳ ಗೌಜಿಯೇ ಗೌಜಿ. ಅಲ್ಲದೆ ಸಾಲೆನ ಸಹಾಯಾರ್ತ ಸಿಬ್ಬಂದಿಗೆಲ್ಲಾ ಸೇರಿ ನಾಟಕಗಳ್ನೂ ಮಾಡ್ತಿದ್ದೊ. ಅದರ್‌ಲಿ ಮಾ. ಹಿರಣ್ಣಯ್ಯನವರ ‘ದೇವದಾಸಿ’ ನಾಟಕಲಿ ನನ್ನ ‘ಮಣಿಮಂಜರಿ’ ಪಾತ್ರ ಜನ ಮೆಚ್ಚುಗೆ ಗಳ್ಸಿತ್ತ್. ನಾಟಕಲಿ ನನ್ನ ಬೆನ್ನ್ ತಟ್ಟಿ ಪ್ರೋತ್ಸಾಹ ಕೊಡ್ತಿದ್ದವು ತ್ರಿಬಾಸಾ ಪಂಡಿತ ದಿ. ಬಳ್ಳ ಶಂಕರನಾರಾಯಣ ಭಟ್, ಮತ್ತೆ ದೈಹಿಕ ಶಿಕ್ಷಣ ಶಿಕ್ಷಕ ದಿ. ಹೆಚ್. ಕೃಷ್ಣ ಭಟ್ ಇವು.

ಈ ಹವ್ಯಾಸ ಚೆಟ್ಟಳ್ಳಿ ಹೈಸ್ಕೂಲ್ ಸೇರ್‌ದ ಮೇಲೂ ಮುಂದುವರ್ತ್. ಮಕ್ಕಳಿಗಾಗಿ ಸಣ್ಣಸಣ್ಣ ನಾಟಕಗಳ ತಯಾರಿ ಮಾಡೊಕಾಗಿ ಬಾತ್. ಇದರೊಟ್ಟಿಗೆ ಸಾಲೆನ ಸಹಾಯಾರ್ತ ನಾಟಕಗಳ್ನೂ ಮಾಡ್ತಿದ್ದೊ. ಅದರ್ಲಿ ಎ. ಎಸ್. ಮೂರ್ತಿಯವರ ‘ಹುಚ್ಚ’ ನಾಟಕದ ನನ್ನ ಶಾಮಣ್ಣ (ಹುಚ್ಚ)ನ ಪಾತ್ರ ಜನಪ್ರಿಯ ಆತ್. ಆ ನಾಟಕನ ಮತ್ತೆ ಹಲವು ಕಡೆ ಆಡ್ದೊ. ಚೆಟ್ಟಳ್ಳಿಲಿ ದಿ. ಬಿ.ಎ. ಅಚ್ಚಯ್ಯ, ದಿ. ಕೆ.ಎನ್. ರಾಮಚಂದ್ರ ಮತ್ತೆ ಜಿ.ಎಲ್. ನಾಗರಾಜ್ ಹಾಂಗೆ ಕೆಲವು ನಾಟಕದ ಜೋಸ್ತಿಗಳ ನೆನ್ಪಾದೆ. ನಾವು ಗಣೇಶೋತ್ಸವ ಸಮೆಲಿ ಕೆಲವು ಕನ್ನಡ, ತುಳು ನಾಟಕಗಳ ಚೆಟ್ಟಳ್ಳಿಲಿ ಅಲ್ಲದೆ ಸಿದ್ದಾಪುರ, ಪಾಲಿಬೆಟ್ಟಲೂ ಮಾಡಿದ್ದೊ.

ನನ್ನ ಈ ನಾಟಕದ ಪ್ರೀತಿಗೆ ಈಗ ಪುಸ್ತಕ ರೂಪ ಕೊಡೊವು ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು

ಸಾಹಿತ್ಯ ಅಕಾಡಮಿಯವು. ಅದರ ಅಧ್ಯಕ್ಷರ್, ಪುಸ್ತಕ ಆಯ್ಕೆ ಸಮಿತಿ ಮತ್ತೆ ಎಲ್ಲಾ ಸದಸ್ಯರಿಗೆ ತುಂಬು ಹೃದಯದ ದನ್ಯವಾದಗ.

ನನ್ನ ಎಲ್ಲಾ ಬರವಣಿಗೆಗೆ, ನಾಟಕಗಳ ಓಡಾಟಕ್ಕೆ ಸ್ಫೂರ್ತಿಯ ಚಿಲುಮೆ ಆಗಿದ್ದದ್ ನನ್ನ ಹೆಣ್ಣ್ ಕನಕ. ನನ್ನ ಬರವಣಿಗೆಗಳ ಓದಿ ಮೆಚ್ಚೊವು, ಪ್ರೋತ್ಸಾಹ ಕೊಡೊವು ಹಿರಿಯರಾದ ಶ್ರೀಮತಿ ಎಂ.ಜಿ. ಕಾವೇರಮ್ಮ, ಡಾ: ಕಾವೇರಿಮನೆ ಬೋಜಪ್ಪನವು. ಆತ್ಮೀಯರಾದ ಶ್ರೀ ಬಾರಿಯಂಡ ಜೋಯಪ್ಪ, ಶ್ರೀ ಎ.ಕೆ. ಹಿಮಕರ, ಶ್ರೀಮತಿ ಲೀಲಾ ದಾಮೋದರ, ಶ್ರೀ ಎಡಿಕೇರಿ ವಿಶ್ವನಾಥನವುಕೆ ನನ್ನ ಕೃತಜ್ಞತೆಗ. ಅಬಿಮಾನ ಪಡೊವು ನನ್ನ ಬಾವ ಶ್ರೀ ಕಟ್ಟೆಮನೆ ಲಕ್ಷ್ಮಣ ಮತ್ತೆ ಸೋದರರ್, ತಮ್ಮ ಅಂಬೆಕಲ್ಲು ಬಾಲಕೃಷ್ಣ ಮತ್ತೆ ಕೆಲವು ಆತ್ಮೀಯರ, ಬಂದುಗಳ ದೊಡ್ಡ ಗುಣನ ಮರಿಯಕೆ ಆಕಿಲೆ.

ಅಪ್ಪನ ಮೇಲೆನ ಪ್ರೀತಿಂದ ಈ ನಾಟಕಗಳೆಲ್ಲಾ ಅಕ್ಷರ ಜೋಡಣೆ ಮಾಡ್ದಂತ ನನ್ನ ಮಗಳು ಶ್ರೀಮತಿ ಅಲಕಾ, ನನ್ನ ಬರವಣಿಗೆಗಳ ಕುಸೀಂದ ಓದಿ ಹೆಮ್ಮೆಪಡುವ ನನ್ನ ಮಕ್ಕ ಡಾ. ನಿವೇದಿತಾ ಮತ್ತೆ ಜಾಹ್ನವಿ, ಅಳಿಯಂದರ್ ಶ್ರೀ ಹರಿಕಿಶೋರ್ ಅಗರಿ, ಶ್ರೀ ಮುರಳೀಧರ ಕಟ್ಟೆಮನೆ ಇವರೆಲ್ಲರ ನೆನ್ನಿಕಣೆ.

1–6–2022 **ಪಿ.ಜಿ. ಅಂಬೆಕಲ್**
ಬೆಂಗಳೂರು 9481390089

# ಪುಟನೋಟ

# ಗೂಡೆ ಬೇಕಾಗುಟ್ಟು

**ಪಾತ್ರಗ :–**

1. ನೀಲಮ್ಮ

   (ಗೂಡೆ ಹುಡುಕುವ ಶರತ್ ನ ಅಮ್ಮ)

2. ಶರತ್

   (ಅಮೇರಿಕಾ ರಿಟರ್ನ್‍ಡ್ ಮೊದುವೆಗೆ ಗೂಡೆ ಹುಡ್ಕುವ ಹೈದ)

3. ಶಶಿರೇಖ

   (ಶರತ್‍ನ ತಂಗೆ)

4. ಶಾಮು

   (ಶರತ್‍ನ ಜೋಸ್ತಿ)

# ದೃಶ್ಯ – 1

**(ರಿಟೇರ್ಡ್ ತಶೀಲ್ದಾರ್ ಪೊನ್ನಪ್ಪನವರ ಬಂಗ್ಲೆ. ಮಾಡರ್ನ್ ಡ್ರಾಯಿಂಗ್ ರೂಮು, ಅಮೇರಿಕಾಂದ ಬಂದ ಮಂಜ ಶರತ್ ಅದರ ಮತ್ತೂ ಲಾಯಿಕ್ ಕಾಂಬಾಂಗೆ ಮಾಡ್ತಾ ಉಟ್ಟು. ಗೋಡೆ ಮೇಲೆ ನೇತಾಡ್ಸಿಕಂಡಿದ್ದ ತಿರ್ಪತಿ ವೆಂಕಟ್ರಮಣ ದೇವ್ರ ಪಟನಾ ತೆಗ್ದ್, ಅದರ ಜಾಗೆಲಿ ಒಂದು ಅರೆಬೆತ್ತಲೆ ಗೂಡೆನ ಕೇಲೆಂಡರ್ ನೇತ್ ಹಾಕಿತ್. ಒಮ್ಮೆ ಎಲ್ಲಾ ಸೆರಿ ಆಗುಟ್ಟಾಂತ ನೋಡಿ ಮೆಚ್ಚಿಗೆನ ಮೋರೆ ಮಾಡಿಕಂಡ್ ಸೋಪಾದ ಮೇಲೆ ಕುದ್ದ್ ಕಾಲ್ನ ಎದ್ರಿದ್ದ ಟೀಪಾಯಿ ಮೇಲೆ ಇಸಿ ಸಿಗ್ರೇಟ್ ಹೊತ್ಸಿ ಹೊಗೆ ಬುಟ್ಟ್ ಕಂಡ್ ಇರ್ಕನ ಅವನ ಅಮ್ಮ ನೀಲಮ್ಮನವು ದೇವ್ರಿಗೆ ದೀಪ ಇಸಿ ಗಂಧದೂಪದ ಆರತಿ ಎತ್ತಿ,ಅದರ ಹೊರೆಗೆ ಇದ್ದ ವೆಂಟ್ರಮಣ ದೇವ್ರ ಪಟಕ್ಕೆ ಹಿಡಿಯಕೆ ಬಂದ್ ನೋಡ್ರೇ...)**

ನೀಲಮ್ಮ : (ಭಕ್ತಿಂದ) ಮೂಕಂ ಕರೋತಿ ವಾಚಲಂ, ಪಂಗುಂ ಲಂಘಯತೇ ಗಿರಿ... (ಸ್ತೋತ್ರ ಹೇಳ್ತಾ ಬಂದ್ ತಿರ್ಪತಿ ತಿಮ್ಮಪ್ಪನ ಪಟ ಇದ್ದ ಕಡೆ ನೋಡಿ, ಪಟದ ಬದ್ಲಿಗೆ ಅರೆಬೆತ್ತಲೆ ಗೂಡೆನ ಕೆಲೆಂಡರ್ ಕಂಡ್ ತಬ್ಬಿಬ್ಬಾಗಿ) ಇದೇನ್ ಸರತ್, ಇಲ್ಲಿದ್ದ ತಿರ್ಪತಿ ತಿಮ್ಮಪ್ಪನ ಪಟ ಎಲ್ಲಿ?

ಶರತ್ : ಆಂ... ಈ ಮೋಡರ್ನ್ ಸೆಟ್ಟಿಂಗಿಗೆ ಆ ಹಳೇ ಪೊಟೋ ಲಾಯಿಕ್ ಕಾಂಬೊದ್ಲೆಂತ ತೆಗ್ದೆ.

ನೀಲಮ್ಮ : ಅಲ್ಲನೇ ನಾ ದೇವ್ರಿಗೆ ದೀಪ ಇಸಿ ಗಂಧದೂಪದ ಆರ್ತಿ ಎತ್ತೊನೋಂತ ಬಂದರೆ ಇಲ್ಲಿ ಯಾವದೋ ಬೇವರ್ಸಿ ಗೂಡೆನ ಪಟ ಹಾಕೊಳಲ್ಲಾ?

ಶರತ್ : ಏನಮ್ಮಾ ನೀ, ಈಗನ ಕಾಲಕ್ಕೆ ಸೆರಿಯಾಗಿ ಲಾಯಿಕ್ ಜೋಡ್ಸಿಯೊಳೆ?

ನೀಲಮ್ಮ : ಏನ್ ಲಾಯಿಕ್ ನಿನ್ನ ತಲೆ. ಯಾರಿಗೆ ನಾ ಧೂಪದ ಆರತಿ ತೋರ್ಸಲಿ? ಮುಂದೆ ನಮ್ಮ ಕುಲದೇವ್ರು ತಿಮ್ಮಪ್ಪನ ಪಟ ತಂದಿಸ್.

ಶರತ್ : ಧೂಪಾರತಿ ತಾನೆ? ಆ ಕೆಲಂಡರಿಗೇ ತೋರ್ಸು ಏನೀಗ?

ನೀಲಮ್ಮ : ಅಯ್ಯೋ ಕರ್ಮನೇ, ಆ ಬೇವರ್ಸಿಗೆ ಆರತಿ ಎತ್ತೀಂತ ಹೇಳಿಯಲ್ಲಾ? ನಿಂಗೇನ್ ತಲೆ ಸೆರಿ ಉಟ್ಟಾ? ಆ ಹಡ್ಬೆಗೆ ನಿನ್ನ ಸಿಗ್ರೇಟ್ ನ ಹೊಗೆನ ಆರತಿ ತೋರ್ಸು!

ಶರತ್ : ಈಗ ಏನಾತಮ್ಮಾ? ಗಂಧ ಧೂಪದ ಆರತಿ ತೋರ್ಸುದು ಯಾಕೆ? ಕೋಣೆ ಗಮಗಮಾಂತ ಹೇಳಲಿ? ನುಸಿಗ ಇದ್ದರೆ ಸಾಯಲೀಂತ ತಾನೆ?

ನೀಲಮ್ಮ : ಅಯ್ಯೋ ಹೆಬಗಾ, ದೇವ್ರಿಗೆ ಆರತಿ ಎತ್ತುದು ನುಸಿ ಸಾಯಲಿಂತನಾ? ನೀ ಅಮೇರಿಕಾಕ್ಕೆ ಹೋಗಿ ಪೂರಾ ಕೆಟ್ಟ್ ಹೋಗೊಳ, ಅದೇನೋ ರೂಮುಗಳೆಲ್ಲಾ ಮೋಡರ್ನ್ ಮಾಡ್ನೇಂತ ಏನೋ ಎಲ್ಲಾ ತಲೆಹರ್ಟೆ ಮಾಡ್ತಾ ಒಳಾ? ಇಂದ್ ನಿಂದ್ ಇಪ್ರೀತ ಆತ್?

ಶರತ್ : ಏನಾತಮ್ಮ ಯಾಕೆ ಹಿಂಗೆ ಬೊಬ್ಬೆ ಹೊಡಿತಾ ಒಳ?

ನೀಲಮ್ಮ : ಬೊಬ್ಬೆ ಹೊಡಿಯದೆ ಏನ್ಮಾಡ್ಲಿ? ಆ ದೇವ್ರ ಪಟನ ತೆಗ್ದ್ ಎಲ್ಲಿಯೋ ಹಾಕೊಳಲ್ಲಾ? ಮುಂದೆ ಈ ಹಡ್ಬೆನ ಪೊಟೋನ ತೆಗ್ದ್ ಇಡ್.

ಶರತ್ : ಈ ರೂಮು ಲಾಯಿಕ್ ಮಾಡಿಯೊಳೆನಾ ಇಲ್ಲೆನಾ?

ನೀಲಮ್ಮ : ತೋಟ ಸಿಂಗಾರ ಒಳೆಗೆ ಗೋಳಿಸೊಪ್ಪೂಂತ ನೀವುಗೆ ಅಮೇರಿಕಾಲಿ ಇಂತಾ ಉರ್ಬುಳಿ ಗೂಡೆಗಳೇ ದೇವ್ರುಕಂಡದೆ?

ಶರತ್ : ನಿನ್ನ ತಿರ್ಪತಿ ತಿಮ್ಮಪ್ಪನ ಪಟ ಇದ್ದರೆ ಮಾತ್ರ ಮನೆಲಾಯಿಕಾ? ನಾ ಏನ್ ಮಾಡ್ರೂ ನಿಂದ್ ಪಿರಿ ಪಿರಿ ಉಟ್ಟೇ ಉಟ್ಟು? ನಾ ಪುಸ್ತಕ ಹಿಡಿವಾಂಗೇ ಇಲ್ಲೆ? ಲ್ಯಾಪ್‌ಟಾಪ್ ನೋಡುವಾಂಗೆಇಲ್ಲೆ?

ನೀಲಮ್ಮ : ಮತ್ತೆ ಎಂತದ್ ಗಂಟೆಕಟ್ಲೆ ಪುಸ್ತಕ ಹಿಡ್ಕಂಡ್ ಕುಕ್ಕುರು ಬೊಡ್ಡರೆ, ಅದೆಂತದೋ ಪೆಟ್ಟಿಗೆನ ಬುಡ್ಸಿಕಂಡ್ ಕುದ್ದರೆ ಇತ್ತನ ಗೇನನೇ ಇಲ್ಲೆ? ಯಾವುದೋ ಲೋಕಲಿ ಇದ್ದಿಯಾ? ಅದಲ್ಲದೆ ಬಾಯಿಲಿ ಸಿಗ್ರೇಟ್ ಬೇರೆ

ಶರತ್ : ಅಯ್ಯೋ ಅಮ್ಮಾ ನಾವು ಕೆಲ್ಸ ಮಾಡ್ದೇ ಈ ಲ್ಯಾಪ್ ಟಾಪ್ಲಿ, ನೀ ಹೇಳುವಾಂಗೆ ಪುರಾಣ, ವೇದಾಂತ ಓದಿಕಂಡ್ ಕುದ್ದರೆ ಈಗನ ಕಾಲಲಿ ಆಕಿಲ್ಲೆ.

ನೀಲಮ್ಮ : ನಿನ್ನೊಟ್ಟಿಗೆ ಮಾತಾಡಿಕೆ ಬೊತ್ತಪ್ಪಾ? ನಂಗೇನ್ ಬೇರೆ ಕೆಲ್ಸ ಇಲ್ಲೆನಾ? (ಬೇಜಾರ್ಲಿ ಒಳೆಗೆ ಹೋಕೆ ನೋಡಿಕಂಡ್) ಮೂಕಂ ಕರೋತಿ ವಾಚಲಂ... ಈ ಸ್ಲೋಕ ನಿಂಗೆ ಹೇಳಿ ಮಾಡ್ಸಿದಾಂಗೆ ಉಟ್ಟು. ದೇವ್ರ ದಯೆಂದ ಬಾಯಿ ಬಾರದಂವಂಗೂ ಮಾತ್ ಬಂದದೆ ಗಡ, ಕುಂಟನೂ ಪರ್ವತ ಹಾರ್ದೆ ಗಡ. ನಿನ್ನ ಲೆಕ್ಕಲಿ ತಿರ್ಗಾಮುರ್ಗಾ ಆಗುಟ್ಟು. ನೀ ಸಮುದ್ರನ ಹಾರಿ ಅಮೇರಿಕಾಕ್ಕೇನೋ ಹೋದಾ, ಆದರೆ ಬಾಯಿ ತುಂಬಾ ಅವ್ವಾ ಅವ್ವಾಂತ ಮಾತಾಡ್ ತಿದ್ದಂವ ಈಗ ಬಾಯಿಬಾರದವನಾಂಗೆ ಆಗೊಳಾ?

ಶರತ್ : ನಂಗೆ ಬಾಯಿ ಬಂದದೆ, ಆದರೆ ಮೊದುವೆ ಸಂಗ್ತಿ ಒಂದು ಬುಟ್ಟರೆ?

ನೀಲಮ್ಮ : ಯಾಕೆ ಮೊದುವೆ ಸಂಗ್ತಿ ಮಾತಾಡಿಕೆ ಬೊತ್ತಾ? ನಿಂಗೆ ಮೊದುವೆ ಆವ ಪ್ರಾಯ ಆತ್ಲೆನಾ?

ಶರತ್ : ಹಂಗಲ್ಲಾ ನಂಗೆ ಇಲ್ಲಿನ ಮೊದುವೆ ಸಿಸ್ಟಮೇ ಕುಸಿ ಇಲ್ಲೆ.

ನೀಲಮ್ಮ : ಏನ್ ನಮ್ಮ ಕ್ರಮ ಸೆರಿ ಇಲ್ಲೆನಾ? ಅದೊಂದೂ ಆಕಿಲ್ಲೆ, ನಾಲ್ಕ್ ಗೂಡೆಗಳ ಜಾತಕ ಕೂಡಿ ಬಂದದೆ, ಅವು ನಿನ್ನ ಒಪ್ಪಿಗೆನ ಕಾಯ್ತಾ ಒಳೊ, ಅವುಕೆ ಉತ್ತರ ಕೊಡೊಕೋ ಬೇಡನೋ?

ಶರತ್ : ನೀವು ಏನಾರ್ ಉತ್ತರ ಕೊಡಿ, ನಂಗೆ ಮಾತ್ರ ನೀವು ನೋಡಿ ಇಸಿದ ಕುರಿಗಳ ಕುತ್ತಿಗೆಗೆ ತಾಳಿ ಕಟ್ಟಿಕೆ ನಾ ರೆಡಿ ಇಲ್ಲೆ.

ನೀಲಮ್ಮ : ಅದೇಕೆ ನಾವು ನೋಡಿಸಿದ ಗೂಡೆಗಳ ಕುರೀಗಂತ ಹೇಳಿಯ? ನಾವು ಹುಡ್ಕಿ ಹುಡ್ಕಿ ಅಕೇರಿಗೆ ಜಾತಕ ಹೊಂದಿದ ನಾಲ್ಕ್ ಗೂಡೆಗಳ್ಲಿ ನಿಂಗೆ ಒಪ್ಪಿಗಾದ ಗೂಡೆನ ಮೊದುವೆ ಮಾಡೊನೋಂತ ನಿಮ್ಮಪ್ಪ ಹೇಳ್ತಾ ಒಳೊ.

ಶರತ್ : ಓ ನೀವು ನೋಡ್ದ ನಾಲ್ಕ್ ಗೂಡೆಗಳೋ, ಒಂದು ಭದ್ರಕಾಳಿ, ಮತ್ತೊಂದು ಈಸ್ಟ್ ವೆಸ್ಟ್ ಗಂಗಮ್ಮ, ಇನ್ನೊಂದುಕೋಲುಕಡ್ಡಿ, ನಾಲ್ಕ್ ನೇದ್ ಪಿ.ಯು.ಸಿ. ಪೈಲ್, ಇಂತವರ ನಾಕಟ್ಟಿಕಣಕೋ? ನೀವುಗೆ ಜಾತಕ ಹೊಂದಿರೆ ಮಾತ್ರ ಸಾಕಾ?

ನೀಲಮ್ಮ : ನೀ ಒಬ್ಬ "ಒಲ್ಲದ ಗಂಡಂಗೆ ಮೊಸ್ರಲ್ಲಿ ಕಲ್ಲ್"ಂತ ಹೇಳುವಾಂಗೆ ಒಂದಲ್ಲರೆ ಒಂದು ಸೂನೆ ತೆಗಿತಾ ಒಳ. (ಬೇಜಾರ್ಲಿ ಒಳೆಗೆ ಹೋದೆ)

# ದೃಶ್ಯ – 2

**(ಶರತ್‌ನ ತಂಗೆ ಶಶಿರೇಖ ಮತ್ತೆ ಅವನ ಜೋಸ್ತಿ ಶಾಮು ಬಂದವೆ)**

ಶಾಮು : ಓಹೋ ಜಾತಕದ ಜಗಳ ಮತ್ತೆ ಸುರಾದಂಗೆ ಕಂಡದೆಲ್ಲಾ?

ಶಶಿ : ಓ ಅದೇ ಮೂರು ಕಾಲ್ನ ಓಟ

ಶರತ್ : ಎಂತದ್ ಅದ್ ಮೂರು ಕಾಲ್ನ ಓಟಂತೇಳ್ರೆ?

ಶಾಮು : ಜಾತಕ ಹೊಂದುಸುದು ಮೂರು ಕಾಲ್ನ ಓಟದಾಂಗೆ ಒಬ್ಬನ ಒಂದು ಕಾಲಿಗೆ ಮತ್ತೊಬ್ಬನ ಒಂದು ಕಾಲ್ನ ಕಟ್ಟಿ ಓಡ್ಸಿದಾಂಗೇಂತ ನಿನ್ನ ತಂಗೆ ಹೇಳ್ತಾ ಉಟ್ಟು. (ಶಶಿರೇಖಾ ಒಳೆಗೆ ಹೋದೆ)

ಶರತ್ : ಅವ್ಳು ಹೇಳ್ದ್‌ಸೆರಿ, ಉದ್ದ ಗುಡ್ಡು, ತೋರ ಸಪುರ, ಕುಂಟಿ ಕುರ್ಡಿ ಹೇಂಗಿದ್ದರೂ ಜಾತಕ ಹೊಂದೀತ್‌ಂತ ಕುಂಟಿಕಂಡ್ ಜೀವನ ನಡ್ಸೊಕು. ಇದೇ ನಮ್ಮ ಮೊದುವೆನ ಪದ್ಧೊತಿ

ಶಾಮು : ಓಹೋ ಹಂಗಾರೆ ನಿಂಗೆ ಇಂಟರ್ನೆಟ್ ಲವ್ವ್ ಗೂಡೆನೇ ಆಕೋ? ಇಲ್ಲೆ ಲೀವಿಂಗ್ ಟುಗೆದರ್ ಗೂಡೆಗ ಆಕೋ?

ಶರತ್ : ಹಂಗೇನಿಲ್ಲೆ ಇರ್ಲ್ ಕಂಡ ಬಾಮಿಗೆ ಹಗಲ್ ಬೀಳುವಾಂಗೆ ಆಕೆ ಬೊತ್ತಲ್ಲಾ?

ಶಾಮು : ಹಾಂಗೆ ಬಾಮಿಗೆ ಬೀಳಿಕಾಗದ್‌ಂತನೇ ಅವ್ವ ಅಪ್ಪಂದರ ಪ್ರಯತ್ನ ಮತ್ತೆ ಮೊನ್ಸರ್ಲಿ ಹೊಂದಾಣಿಕೆ ಬೇಕು.

ಶಶಿ : (ಒಳೆಗೆಂದ ನಿಲ್ಕಿ ನೋಡಿ) ಹೊವುದು ಹೊವುದು ಹೊಂದಾಣಿಕೆ ಆಕೆ ಅದರ ಗುದ್ದಿ, ಕುಟ್ಟಿ, ಅರ್ದ್ ಪಿಂಜ್ಚಿ ಆಕನ ಹೊಂದಾಣಿಕೆ ಆದೆ.

ಶರತ್ : ಸೆರಿಯಾಗಿ ಹೇಳ್ದೆ ಶಶಿ, ಗೂಡೆಗಳ ಆಸೆ ಆಕಾಂಸೆಗಳ

ದ್ವಂಸ ಮಾಡಿ ಅವರ ಗುಲಾಮಗಿರಿಗೆ ಇಳ್ಸುದಿದ್ದರೆ ಹೊಂದಾಣಿಕೆ ಹೇಂಗೆ ಬಂದದೆ?

ಶಶಿ : (ಏನ್ ಗೊತ್ತಿಲ್ಲದವರ ಹಾಂಗೆ ಒಳಗೆ ಹೋಕೆ ನೋಡಿಕಂಡ್) ಅಯ್ಯೋ ನಾ ಎಂತ ಹೇಳ್ದೆ? ಅಲ್ಲಿ ಅಡಿಗೆ ಮನೆಲಿ ಗೈಪುಗೆ ಇಸಿದ ಸೋಂತೆ ಕಾಯಿ ಬೆಂದರೂ ಬೇಳೆ ಬೇತ್ಲೆ, ಅದಕ್ಕೆ ಆ ಬೇಳೆನ ಕುಟ್ಟಿ, ಗುದ್ದಿ, ಕಡ್ಡ್, ಅರ್ದ್, ಪಿಂಣ್ಜಿ ಬೇಳೆನ ಸೆರಿ ಮಾಡಿ ಸೋಂತೆಕಾಯಿ ಗೈಪುಗೆ ಹೊಂದುವಾಂಗೆ ಮಾಡ್ದೆ. ನಾ ಗೈಪುನ ಹೊಂದಾಣಿಕೆನ ವಿಸಯ ಮಾತಾಡ್ರೆ ನೀವು ಇಲ್ಲಿ ಗೂಡೆ ಹೈದನ ಹೊಂದಾಣಿಕೆ ವಿಸಯ ಮಾತಾಡ್ರೆ, ನಂಗ್ಯಾಕೆ ನಿಮ್ಮ ಮಾತ್ (ಒಳೆಗೆ ಹೋದೆ).

ಶರತ್ : (ಗೆದ್ದವನ ಹಾಂಗೆ) ನೋಡ್ದಾ ಶ್ಯಾಮ್, ಪಾಪದ ಗೂಡೆಗಳ ಕಟ್ಟಿಕಂಡ್ ಮೀಸೆ ತಿರ್‌ಂಟಿ ಅವಳ ಸೋತ, ಸತ್ತ ಹೆಣ್ತನದ ಮೇಲೆ ಕೊಣ್ಡ್ ದುಡ್ದ್ ನಮ್ಮ ಜೆನಗಳ ಪೌರು?

ಶಾಮು : ಶರತ್ ಏನೋ ಎಲ್ಲಾ ಮಾತಾಡಿಯಲ್ಲಾ, ಮೊದುವೆ ಆಕೆ ನಿನ್ನ ಕಂಡಿಸನ್ ಏನೆಲ್ಲಾ ಉಟ್ಟು ಅದರ ಸೀದಾ ಹೇಳಕಲ್ಲಾ?

ಶಶಿ : (ಒಳಗೆಂದ ಬಂದ್) ಅವನ ಕಂಡಿಸನ್ ಗಿಂಡಿಸನ್ ಎಲ್ಲಾ ನಂಗೆ ಗೊತ್ತುಟು, ಅವಂಗೆ ಗೂಡೆ ಬೆಳ್ಳಂಗೆ ಇರೊಕು, ಹಂಗೇಂತ ಹಾಂತೆನಾಂಗೆ ಬಿಳ್ಚಿಕಂಡ್ ಇರಿಕಾಗದ್. ಕಣ್ಣ್ ಹೊಳ್ಪೊಕು ಪುಚ್ಚೆ ಕಣ್ಣಲ್ಲ, ಮೈ ಕೈ ತುಂಬಿಕಂಡಿರೊಕು ಹಂಗೇಂತ ದುಡುಮಿ ಆಕಾಗದ್, ಉದ್ದ ಬೇಕು ಕೋಲ್‌ಕಡ್ಡಿ ಅಲ್ಲ. ಒಟಾರೆ ನೋಡಿಕೆ ಐಶ್ವರ್ಯ ರೈನಾಂಗೆ ಸುರಸುಂದರಾಂಗಿ ಆಗಿರೊಕು.

ಶಾಮು : ಒಟ್ಟಾರೆ ಆ ಗೂಡೆ 'ಡ್ರೀಮ್ ಗರ್ಲ್' ಆಕುಂತೇಳ್, ಹಂಗಾರೆ ಅಂತಾ ಗೂಡೆ ಸಿಕ್ಕುದು ಕಸ್ಟ್ ಲೇ.

ಶರತ್ : ನೀವು ಬೆರೀ ನನ್ನ ಕಂಡಿಸನ್ ಕೇಳ್ದರಲ್ಲಾ, ನಮ್ಮಪ್ಪನ

ಕಂಡಿಸನ್‌ಕೇಳ್ತ್‌ಲೆ ಅಲ್ಲಾ?

ಶಾಮು : ನಿನ್ನ ಅಪ್ಪಂದೆಂತಪ್ಪಾ ಕಂಡಿಸನ್ ನೀ ಹೇಳ್ ನೋಡೊನೊ.

ಶರತ್ : ಹೇಳ್ನೆ ಕೇಳ್ ಇಬ್ಬರ ಜಾತಿ ಒಂದೇ ಆಕು, ಬಳಿ, ಗಣ, ರಾಸಿಕೂಟ ಎಲ್ಲಾ ಹೊಂದಿಕಣಕು, ಅವರ ಅಂತಸ್ತ್, ಸ್ತಿತಿ ಗತಿ ಹೇಳಿಕಂಬಾಂಗೆ ಇರೊಕು.

ಶಾಮು : ಇದೇನ್ ನಿನ್ನ ಅಪ್ಪನ ಕಂಡಿಸನ್ ಏನಲ್ಲಾ, ಇದೆಲ್ಲಾ ಇರುವ ಪದ್ದತಿ

ಶರತ್ : ಅಪ್ಪನ ಈ ಪದ್ದತಿಂದಾಗಿಯೇ ನನ್ನ ಮೊದುವೆ ರದ್ದತಿ ಆದು, ಇಸ್ಟಲ್ಲಾ ಗೂಡೆ ಗ್ರಾಜುವೇಟ್ ಆಕು, ಮನೆಕೆಲ್ಸ, ಅಡಿಗೆನೂ ಲಾಯಿಕ್ ಮಾಡೊಕಡಾ?

ಶಾಮು : ಅಡಿಗೆನೂ ಮಾಡಿಕೆ ಬಾರದ ಗೂಡೆನ ತಂದರೆ ನೀನೇ ಕುಕ್ ಆದಿಯಾ?

ಶರತ್ : ಅಡಿಗೆ ಮಾಡಿಕೆ ಬಾದೇ ಒಂದು ಕ್ವಾಲಿಪಿಕೇಸನಾ? ನಂಗೆ ಇಲ್ಲಿನ ಸಿಸ್ಟಮೇ ಸೆರಿ ಕಾಂಬೊದುಲ್ಲೆ.

ಶಾಮು : ನಿಂಗೆ ಅಮೇರಿಕಾದ ಸಿಸ್ಟಮೇ ಸೆರಿಕಾಂಬೊದು, ಆದರೆ ನಾವುಗೆ ನಮ್ಮ ಪದ್ದತಿ, ಸಂಸ್ಕೃತಿಗಳ ಬುಡಿಕೆ ಆದೆನಾ ನಿಂಗೆ ಗೊತ್ತುಟಾ ಈಗ ನಮ್ಮ ಗೂಡೆಗ ಈ ಕೊರೋನಾರೋಗ ಬಂದ್ ನಿನ್ನಂತ ಪಾರಿನ್ಲಿ ಇರುವ ಹೈದಂಗಳ ಬುಡು ಬೆಂಗಳೂರ್ಲಿ ಇರುವ ಹೈದಂಗಳೂ ಬೇಡಾಂತ ಹೇಳುವೆ.

ಶರತ್ : ನಾ ಹಂಗೆ ಹೇಳ್ದಲ್ಲಾ, ನಮ್ಮ ಅಜ್ಜ ಪಿಜ್ಜನ ಕಾಲದ ಪದ್ದತಿ ಈಗೊಳೂ ಯಾಕೆ, ಜಾತಕ ಗೀತಕ ಯಾಕೇಂತ?

ಶಾಮು : ಹಂಗಾರೆ ನಿಂಗೆ ಯಾವ ರೀತಿ ಮೊದುವೆ ಬೇಕು? ಇಂಟರ್ನೆಟ್ ಲವುದಾ ಅಥವಾ ಮೆರೇಜ್ ಬ್ಯೂರೋಗಳ್ಲಿ ಗೂಡೆನ ಹುಡ್ಕಿಯಾ?

# ದೃಶ್ಯ – 3

**(ಶರತ್‌ನ ಪೋನಿಗೆ WhatsApp ಮೆಸೆಜ್‌ಗ ಮೇಲೆಂದ ಮೇಲೆ ಬಂದದೆ)**

ಶಶಿ : (ಒಳಗೆಂದ ಬಂದ್) ಏನಣ್ಣಾ ನಿನ್ನ ಮೊಬೈಲ್ ಬಾರಿ ಹೊಡ್ಕಂತಾ ಉಟ್ಟು, ಯಾರ್ದ್ ಗೂಡೆಗಳ್ದೋ? ಮ್ಯಾರೇಜ್ ಬ್ಯೂರೊದವದ್ದೋ

ಶರತ್ : ನಿಂಗೇಕೆ ಅದೆಲ್ಲಾ? ನೀ ತೆಪ್ಪಗೆ ನಿನ್ನ ಕೆಲ್ಸ ನೋಡು.

ಶಾಮು : ಏನಪ್ಪಾ ನೀ ನಿನ್ನ ಮೆಸೆಜ್‌ಗಳ ನೋಡ್ತಾ ಇರ್, ನಾ ಹೊರೆಗೆ ಹೋನೆ.

ಶರತ್ : ಬಾ ಅಂತದೇನೂ ಇಲ್ಲೆ, ಮ್ಯಾರೇಜ್ ಬ್ಯೂರೋದವು ಕೆಲವು ಪ್ರೋಪೊಸಲ್ಸ್ ಕಳ್ಸಿಯೊಳೊ, ನೀನೂ ನೊಡಕ್ ಬಾ.

ಶಾಮು : ಓ ಗುಡ್ ನ್ಯೂಸ್, ಈ ಸತ್ತಿಯಾರ್ ಒಂದು ಗೂಡೆನ ಸಿಲೆಕ್ಟ್ ಮಾಡ್ ಮಾರಾಯಾ?

ಶರತ್ : ಇವರ ಓಬಿರಾಯನ ಪದ್ದತಿ ನಂಗೆ ಹಿಡ್ಸಿತ್ಲೆ, ಅದಕ್ಕೆ ಒಂದು ಹೈ ಫೈ ಮ್ಯಾರೇಜ್ ಬ್ಯೂರೊಲಿ ಹೆಸ್ರ್ ರಿಜಿಸ್ಟರ್ ಮಾಡ್ದೆ.

ಶಾಮು : ಅವು ಪ್ರೊಪೋಸಲ್ಸ್ ನೊಟ್ಟಿಗೆ ಗೂಡೆಗಳ ಪೊಟೋನೂ ಕಳ್ಸಿರುವೊ.

ಶರತ್ : ನೋಡೊನೊ (ಆರಾಮಲಿ ನೋಡಿಕೆ ಸುರುಮಾಡ್ತ್) ಅರ್ಜಂಟ್ ಮಾಡ್ಬೇಡ ಏಳ್ ತಿಂಗಲ್ಲಿ ಹುಟ್ಟಿದವ ರಾಂಗೆ ಒಂದೊಂದೇ ನೋಡೊನೊ, ಅಕೇರಿಗೆ ನಂಗೆ ನನ್ನದೇ ಸಿಸ್ಟಮ್ ನನ್ನದೇ ಚಾಯ್ಸ್, ನೋ ಓಲ್ಡ್ ಪ್ಯಾಷನ್ಸ್, ನೋ

ಜಾತಕ, ನೋ ಕಾಸ್ಟ್ ಎಂಡ್ ಕ್ರೀಡ್ ಹ...ಹ...ಹ... (ಒಂದೊಂದೇ ಮೆಸೆಜ್ ಗಳ ನೋಡಿಕೆ ಸುರು ಮಾಡ್ದೆ, ಶಶಿ ಅವನ ಹಿಂದೆ ಬಂದ್ ಮೆಲ್ಲೆ ಕದ್ದ್ ನೋಡ್ದೆ ಸುರುನ ಮೆಸೆಜ್ ಓಪನ್ ಮಾಡ್ದೆ) ನೋಡು ಸುರುನ ಪ್ರೋಪೊಸಲ್ ಹೆಸ್ರ್ ರಸಿಯಾ ಬೀಬಿ...

ಶಾಮು : ವ್ಹಾ... ವ್ಹಾ... ಸುಬ್ಹಾನಲ್ಲಾ...!

ಶರತ್ : ಎತ್ತರ ಐದ್ ಪೀಟ್ ನಾಲ್ಕ್ ಇಂಚ್.

ಶಾಮು : ಎತ್ತರ ಸೆರಿಯಾದು!

ಶರತ್ : ಬಣ್ಣ... ಗುಲಾಬಿ... ಗುಲಾಬಿ...

ಶಾಮು : ಆ ಹ್ಹಾ... ಓ... ಅಂಕೇ... ಶರಬೀ... ಶರಬೀ... ವಾ... ವ್ವಾ!

ಶರತ್ : ಹೇಂಗುಟ್ಟು ಗೂಡೆ? ಪೊಟೋನೂ ಇರ್ದು ನೋಡೊನೋ.

ಶಾಮು : ಆದರೆ ಗೂಡೆನ ಜಾತಿ? ಅಲ್ಲ ಮಾರಾಯ ನೀ ಬ್ಯಾರ್ತಿನ ಮೊದುವೆ ಆದರೆ ನಿನ್ನ ಅವ್ವ ಅಪ್ಪನ ಗೆತಿ ಏನ್?

ಶರತ್ : ನಾ ಕಾಸ್ಟ್ ಎಂಡ್ ಕ್ರೀಡ್ ನೋ ಬಾರ್ಂತ ಹೇಳಿದ್ದೆ ಅಲ್ಲಾ? ಇಂದಾ ಪೊಟೋ ಇಲ್ಲಿ.

ಶಾಮು : (ಪೊಟೋ ನೋಡಿ ನೆಗಾಡಿಕಂಡ್ ತಾಟ ಬೊಟ್ಟಿಕಂಡ್) ವ್ಹಾ... ವಂಡರ್ಪುಲ್ ಪರದಾ... ನಾ ಹಟವೋ ಪರದೆಕೆ ಪೀಚೆ... (ಶಶಿ ಬುರ್ಕಾ ಹಾಕಿದ ಗೂಡೆನ ಪೊಟೋ ನೋಡಿ ನೆಗೆ ತಡಿಯಕೆ ಬೊತ್ತದೆ ಬಾಯಿ ಮುಚ್ಚಿಕಂಡ್ ಕುದ್ದದೆ.)

ಶರತ್ : ಇದೇಕೆ ಹಿಂಗಾತ್?

ಶಾಮು : (ನೆಗಾಡಿಕಂಡ್) ಆದ್ದೇನು ಇಲ್ಲೆ ಬುರ್ಕಾ ಹಾಕಿಕಂಡೇ ಪೊಟೋ ತೆಗ್ಸಿಕಂಡ್ ಟ್ಟು ಅಸ್ಟೆ!

ಶರತ್ : ತಡಿ ಬೇರೆ ಮೆಸೆಜ್ಗಳ ನೋಡ್ನೊ.

ಶಾಮು : ಓ ಲವ್ಲೀ...

ಶರತ್ : ಹೆಸ್ರ್ ಲಿಲ್ಲೀ... ಹೈಟ್ ಐದ್ ಅಡಿ ಒಂಬತ್ತ್ ಇಂಚ್

ಶಾಮು : ಓ ಏಣಿನೇ ಬೇಕು, ಅವ್ವ ಅಪ್ಪ ಯಾರೂ ಇಲ್ಲೆನಾ?

ಶರತ್ : ಅವ್ವ ಅಪ್ಪ ಯಾರಾದರೆ ನಂಗೇನ್ ಫೊಟೋ ತೋರ್ಸಿ, ಓ!! ಏನ್ ಬ್ಯೂಟೀ?

ಶ್ಯಾಮು : (ಫೊಟೋ ನೋಡಿ) ಅಯ್ಯೋ... ಅದರ್ಲಿ ಪರದಾನಾ ಹಟವೋಂತ ಇದ್ದರೆ, ಇಲ್ಲಿ ಯಾವ ಪರ್ದೆನೂ ಇಲ್ಲೆಲ್ಲಾ ಮಾರಾಯಾ ಬರೀ ಒಂದು ಬಿಕಿನಿ ಸ್ವಿಮ್ಮಿಂಗ್ ಪೂಲಿಗೆಹಾರಿಕೆ ರೆಡಿ ಆದಾಂಗೆ? (ಶಶಿ ನೋಡಿ ಬಾಯಿ ಮೇಲೆ ಬೆರ್ಳ್ ಇಸಿ ಕುದ್ದದೆ.)

ಶರತ್ : ತಡಿ ಇರ್ ಇಲ್ಲೇನೊ ವಿಸೇಸ ಬರ್ದುಟ್ಟು (ಓದಿದೆ) "ನೀವುಗೆ ಸತ್ಯ ಹೇಳೊಕು ಈಗಾಗಲೇ ನಂಗೆ ಎರ್ಡ್ ಸತ್ತಿ ಡೈವರ್ಸ್ ಆಗುಟ್ಟು, ಈಗ ಮೊದುವೆಗೆ ಯಾವ ತೊಂದರೆನೂ ಇಲ್ಲೆ. ನೀವು ಅಮೇರಿಕಾ ರಿಟರ್ನಡ್ ಆದರ್‌ಂದ ನೀವುಗೆ ಇದೆಲ್ಲಾ ದೊಡ್ಡ ವಿಸಯ ಅಲ್ಲಾಂತ ಇದ್ದದ್ ಇದ್ದಾಂಗೆ ಬರ್ದೋಳೆ. ಅಯ್ಯೋ ದೇವ್ರೆ!

ಶಾಮು : ಹಂಗಾರೆ ಆ ಗೂಡೆಗೆ ಮೊದುವೆಲಿ ಸಾಕಸ್ಟ್ ಸರ್ವೀಸ್ ಉಟ್ಟು, ನಿಂಗೆ ಸುಲ್ಬ ಆತ್.

ಶರತ್ : (ಬೇಜಾರ್ಲಿ ಅದರ ಡಿಲೀಟ್ ಮಾಡಿ) ಸಾಕ್ ಇದರ ಸಾವಾಸ, ಇನ್ನೊಂದರ ನೋಡ್ನೊ ಮುಂದೆ ಬೆರಿ ಫೊಟೋನೋಡ್ನೊಂತ  ಓಪನ್ ಮಾಡ್ದೆ, ಇದ್ ಬಿಚ್ಚೋಲೆ ಗೌರಮ್ಮನ ಹಾಂಗೆ ಉಟ್ಟು, ಒಂದ್ ಒಳ್ಳೆ ಸಾಲೆ ಟೀಚನಾರ್ಂಗೆ ಕಂಡದೆ ಮೋರೆಲಿ ಕಳೆನೇ ಇಲ್ಲೆ, ಮಕ್ಕಳಿಗೆ ಪಾಟ ಮಾಡಿ ಮಾಡಿ, ಬಾಯಿಬೊಡ್ದ್ ಬೇಜಾರ್ಲಿ ಇರುವಾಂಗೆ ಕಂಡದೆ (WhatsAppನ Off ಮಾಡಿ ತೆಪ್ಪಗೆ ಕುದ್ದದೆ)

ಶಾಮು : ಯಾಕೆ ಶರತ್ WhatsApp Off ಮಾಡಿ ಬೇಜಾರ್ ಕುದ್ದ, ನಿನ್ನ ಮ್ಯಾರೇಜ್ ಬ್ಯೂರೋದವರ ಲಿಸ್ಟ್ ಎಲ್ಲಾ ಪೇಲಾದಂಗೆ ಕಂಡದೆ.

ಶಶಿ : (ಹಿಂದೆ ಕುದ್ದ್ ಕಂಡಿದ್ದ ಶಶಿ ಮುಂದೆ ಬಂದ್ ಅಣ್ಣನ ಲ್ಯಾಪ್‌ಟಾಪ್ ತೋರ್ಸಿಕಂಡ್) ಇಲ್ಲೆ ಇನ್ನೂ ಪೇಲಾತ್ಲೆ, ಅಣ್ಣನ ಲ್ಯಾಪ್ ಟಾಪ್ಪ ಲಿ ಒಂದು ಇಂಟರ್ನೆಟ್ ಲವ್ ಅಪ್ಲಿಕೇಸನ್ ಉಟ್ಟು.

ಶರತ್ : (ಆಸ್ಚರ್ಯರ್ಂದ) ನೀ ಒಳಗೆನೇ ಒಳಾಂತ ಗ್ರೇಸಿದ್ದೆ. ನಮ್ಮ ಗುಟ್ಟು ನಿಂಗೆ ಗೊತ್ತಾದರೆ ಮೈಕೇ ಬೇಡ ಊರಿಡೀ ಪ್ರಚಾರ ಆದೆ ಎಲ್ಲಾ ಟಾಂ ಟಾಂ ಮಾಡಿಯ ಬಾ ಇಲ್ಲಿ ನಿಂಗೇ(ಶಶಿಗೆ ಹೊಡಿಯಕೆ ಹೋದೆ ಅದ್ ತೊಪ್ಪುಸಿ ಕಂಡದೆ)

ಶಶಿ : ನನ್ನ ಕೈಲಿದ್ದ ಲ್ಯಾಪ್ ಟಾಪ್ ಲಿ ಬಂದದರ ನೋಡೊಕುತಾದರೆ ಸುಮ್ಮನೆ ಇರ್

ಶರತ್ : ನನ್ನ ಲ್ಯಾಪ್ ಟಾಪ್ ಕೊಟ್ಟಿಯೋ ಇಲ್ಲನೋ. (ಸಿಟ್ಟ್ ಲಿ ಕೇಳ್ದೆ)

ಶಶಿ : ನೀ ಜೋರುಮಾಡ್ರೆ ನಿಂಗೆ ಕೊಡ್ದೇ ಇಲ್ಲೆ. (ಲ್ಯಾಪ್ ಟಾಪ್ ನ ಶಾಮುನ ಕೈಗೆ ಕೊಟ್ಟದೆ.)

ಶಾಮು : ಸುಮ್ಮನಿರ್ ಮಾರಾಯ, ನಿನ್ನ ಉಡ್ ಬಿ ನ ನಾನೇ ಮುಂದೆ ನೋಡ್ನೆ. (ಲ್ಯಾಪ್ ಟಾಪ್ ಓಪನ್ ಮಾಡಿ ಪೊಟೋ ನೋಡಿ ನೆಗೆ ತಡಿಯಕೆ ಆಗದೆ) ಹ... ಹ... ಹ... ಅಬ್ಬಾ ನೀನೇ ನೋಡು.

ಶರತ್ : ಏನಾತ್ ಮಾರಾಯ, ಹಂಗೆ ನೆಗಾಡಿಯಾ ಕೊಡು ಇಲ್ಲಿ.

ಶಾಮು : ನೋಡು ಶಶಿ, (ಶಶಿಗೆ ತೋರ್ಸಿದೆ)

ಶಶಿ : ಅಯ್ಯಯ್ಯೋ... ಎಮ್ಮೆ ಕರು!

ಶರತ್ : ಏನ್ ಅಸ್ಟ್ ತೋರ ಉಟ್ಟಾ?

ಶಶಿ : ಬರೀ ತೋರ ಮಾತ್ರ ಅಲ್ಲಾ ಗುಜ್ಜಾನೆ ಮರಿ.

ಶರತ್ : ಅಸ್ಟ್ ಕಪ್ಪು ಉಟ್ಟಾ? ನೀವು ಡೋಂಗಿ ಮಾಡ್ರೆ

ಶಶಿ : ಕಪ್ಪು ಅಲ್ಲಾ ತೊಳ್ದ ಕೆಂಡ, ಸಪೂರ ಒಂದು ಎಂಬತ್ತೈದ್ ತೊಂಬತ್ತ್ ಕೆ.ಜಿ. ಅಸ್ಟೇ ಇರ್ದು.

ಶರತ್ : (ಸಿಟ್ಟ್‌ಲಿ ಲ್ಯಾಪ್‌ಟಾಪ್ ತಕಂಡ್) ಪೊಟೋ ನೋಡಿ ಬೆಪ್ಪಾಗಿ ತಲೆಗೆ ಕೈ ಹೊತ್ತು ಕುದ್ದದೆ. (ಬಾಕಿಯವು ಹೊಟ್ಟೆ ಹುಣ್ಣಾಗುವಾಂಗೆ ನೆಗಾಡುವೆ.)

* * * ತೆರೆ * * *

# ಸಿದ್ಧಾರ್ಥ
# ಮನೆ ಬುಟ್ಟ್ ಹೊರ್ಟತ್

ಪಾತ್ರಗ :

ಸಿದ್ಧಾರ್ಥ
(ರಾಜ ಶುದ್ಧೋದನನ ಮಂಜ ರಾಜಕುಮಾರ)

ಚೆನ್ನ
(ಸಿದ್ಧಾರ್ಥನ ಸೇವಕ ರಥದ ಸಾರತಿ.)

ಮಾತಿಲ್ಲದ ನಟರ್:

1. ಹಣ್ಣ್ ಹಣ್ಣ್ ತೊಂಡ (ಅಜ್ಜ)
2. ಕುಷ್ಟ ರೋಗಿ.
3. ಹೆಣ ಸುತ್ತ ಮರ್ದುವ ಮೂರು ನಾಲ್ಕ್ ಜೆನ.

## ಪೀಠಿಕೆ

ಬುದ್ಧ... ಲೋಕದ ಉದ್ಧಾರ ಮಾಡಿಕೆಂತಲೇ ಹುಟ್ಟಿದ ಮಹಾನುಭಾವ. ಲೋಕಲಿ ಜೆನ ಅಜ್ಞಾನ ಅಂಧಕಾರಲಿ ತೊಳಲಾಡ್ ತಿರ್ಕನ, ಮೂಢನಂಬಿಕೆಗಳ ಬಲೆಲಿ ಬಿದ್ದ್ ಒದ್ದಾಡ್ ತಿರ್ಕನ ಜನ್ಮತಾಳಿ ಜ್ಞಾನ ಹಾಂಗೂ ಮೋಕ್ಷದ ದಾರಿನ ತೋರ್ಸಿ ಕೊಟ್ಟ ಪುಣ್ಯಾತ್ಮ.

ಕ್ರಿಸ್ತಪೂರ್ವ ಆರನೇ ಸತಮಾನಲಿ ಬಾಳಿ ಬೊದ್ಕಿದಂವಂತ ಹೇಳುವೆ ಬುದ್ಧನ. ಕಪಿಲ ವಸ್ತುನ ಮಹಾರಾಜ ಶುದ್ಧೋಧನ ಮಹಾರಾಣಿ ಮಾಯಾದೇವಿನ ಪುಣ್ಯಗರ್ಭಲಿ ಹುಟ್ಟಿದಂವ ಸಿದ್ಧಾರ್ಥ. ಸಿದ್ಧಾರ್ಥ ಹೊಟ್ಟೆಲಿರ್ಕನೇ ಅವ್ವ ಮಾಯಾದೇವಿ ಒಂದು ದಿವ್ಯ ಕನ್ಸ್‌ನ ಕಂಡತ್ ಗಡ! ಬೆಳಿ ಆನೆ ಒಂದು ತನ್ನ ಸೊಂಡಿಲ್‌ಲಿ ತಾವರೆ ಹೂವುನ ಹಿಡ್ಕಂಡ್ ಸ್ವರ್ಗಂದ ಇಳ್ದ್ ಬಾವ್ದರ ಕಂಡತ್ ಗಡ! ಈ ಕನ್ಸ್‌ನ ಇಚಾರ ಜೋಯಿಸರೊಟ್ಟಿಗೆ ಕೇಳ್ಕನ "ನೀವುಗೆ ಒಬ್ಬ ಮಹಾಪುರುಸ ಹುಟ್ಟಿದೆ, ಅಂವ ಈ ಭೂಮಂಡಲದ ಚಕ್ರವರ್ತಿಯಾದೆ! ಇಲ್ಲದ್ದರೆ ಸರ್ವಸಂಗ ಪರಿತ್ಯಾಗಿಯಾದ ಸನ್ಯಾಸಿಯಾಗಿ ಲೋಕೋದ್ಧಾರ ಮಾಡ್ದೆಂತ ಹೇಳ್ದೊ ಗಡ! ಇದರ ಕೇಳಿ ಶುದ್ಧೋಧನ ಮಹಾರಾಜ ಗಾಬ್ರಿ ಆತ್! ಇದ್ದ ಒಬ್ಬನೇ ಒಬ್ಬ ಮಂಜ ಸಿದ್ಧಾರ್ಥ ಸನ್ಯಾಸಿ ಆದು ಸುತರಾಂ

ಇಷ್ಟ ಆತ್ಲೆ. ಅಂವ ಚಕ್ರವರ್ತಿಯಾಕು ರಾಜಭೋಗಗಳ ಅನುಬೋಗ್ಸೊಕು, ಈ ಭೂಮಂಡಲನ ಆಳೊಕುತ ಗ್ರೇಸಿತ್, ಆಸೆ ಪಟ್ಟತ್. ಹಂಗಾಗಿ ತನ್ನ ಮಂಜ ಸಿದ್ಧಾರ್ಥ ಎಲ್ಲಿಯಾರ್ ಸನ್ಯಾಸಿಯಾಗಿಬುಟ್ಟರೇಂತ ಹೆದ್ರಿ, ಸಕಲ ರಾಜಭೋಗಗಳೂ ಅವಂಗೆ ಸಿಕ್ಕುವಾಂಗೆ ಮಾಡ್ದೆ. ಕಪಿಲವಸ್ತುಲಿ ಎಲ್ಲೂ ದುಃಖದ, ಕಷ್ಟದ ನೆರಳ್ ಸಿದ್ಧಾರ್ಥನ ಕಣ್ಣ್‌ಗೆ ಬೀಳದಾಂಗೆ ಎಲ್ಲಾ ಏರ್ಪಾಡ್ ಮಾಡ್ತ್. ಎಲ್ಲಿ ನೋಡ್ರು ಸುಖ ಸಂತೋಸನೇ ಕಾಣೊಕು, ಸಿದ್ಧಾರ್ಥಂಗೆ ಒಂದು ಚೂರೂ ಬೇನೆ ಕಷ್ಟ ಕಾರ್ಪಣ್ಯಗ ಗೊತ್ತಾಕೇ ಆಗದಾಂಗೆ ಎಲ್ಲಾ ವ್ಯವಸ್ಥೆ ಮಾಡ್ತ್ ಶುದ್ಧೋಧನ. ಯವ್ವನ ಬಾಕನ ರಾಜಕುಮಾರಿ ಯಶೋಧರೆನೊಟ್ಟಿಗೆ ಮೊದುವೆನೂ ಮಾಡ್ತ್, ಮತ್ತೆ ಮಂಜ ರಾಹುಲನೂ ಹುಟ್ಟಿತ್. ಸುಖ ಸಂತೋಸಲಿ ಸಿದ್ಧಾರ್ಥ ತೇಲಿಕಂಡ್ ಇತ್ತ್. ಆದರೆ ವಿಧಿ ಮಾತ್ರ ಬೇರೆನೇ ನಿಗಂಟ್ ಮಾಡಿ ಆಗಿತ್ತ್.

ಸಿದ್ಧಾರ್ಥ : (ಒಂದು ದಿನ ಕತ್ತಲೆ... ಕರಿಕೂಟ ಕತ್ತಲೆ ಇಡೀ ಲೋಕವೇ ನಿದ್ದೆಲಿ ಮುಳ್ಗಿದ ಸಮಯ ರಾಜಕುಮಾರ ಸಿದ್ಧಾರ್ಥ ತನ್ನ ಅರಮನೆಲಿ ನಿದ್ದೆ ಬಾರದೆ ಯೋಚನೆ ಮಾಡ್ದೆ) (ತನ್ನಸ್ಟಕೆ) ನಾ ಯಾರ್, ನನ್ನ ಅಪ್ಪ ಯಾರ್, ಅವ್ವಯಾರ್... ಇವೆಲ್ಲಾ ಈ ಲೋಕಲಿ ಎಲ್ಲಿಂದ ಹುಟ್ಟಿ ಬಂದೊ? ಹೇಂಗೆ ಹುಟ್ಟಿ ಬಂದೊ?

ಈ ಲೋಕಲಿ ನಾ, ನನ್ನ ಅಪ್ಪ ಅವ್ವ, ಕೆಲ್ಸದಂವ ಚೆನ್ನ, ಈ ಅರಮನೆ, ಕೋಟೆ ಇಷ್ಟೆನಾ? ಹಾಂಗಾದರೆ ಬೇರೆವು ಯಾರೂ ಇಲ್ಲೆನಾ? ಇದ್ದರೆ ಎಲ್ಲಿ ಒಳೊ? ಹೇಂಗೆ ಒಳೊ? ನನ್ನ ಜೀವನನ ಈ ಸುಖದ ನೆರ್ಳ್ ಮುಚ್ಚಿಹಾಕುಟ್ಟಾ? ಅಯ್ಯೋ ನಂಗೇ

ಒಂದು ಗೊತ್ತಾದುಲೆ ಏನ್ ಮಾಡ್ಲಿ? (ಹೀಂಗೆ ಏನೇನೊ ಚಿಂತೆಲಿ ಚಡಪಡ್ಸಿದೆ) ಇಲ್ಲೆ ನಾ ಈ ನಾಲ್ಕ್ ಗೋಡೆಗಳ ಆಚೆನ ಲೋಕನ ನೋಡೊಕು, ನೋಡೊಕೇ ನೋಡೊಕೂಂತ ನಿಸ್ಚಯ ಮಾಡ್ತ್ ಸಿದ್ದಾರ್ಥ. (ಪ್ರಕಟ) ಚೆನ್ನ... ಓ ಚೆನ್ನಜ್ಜಾ

ಚೆನ್ನ : ಏನ್ ರಾಜಕುಮಾರ ಈ ಮಧ್ಯ ರಾತ್ರೆಲಿ!?

ಸಿದ್ಧಾರ್ಥ : ಚೆನ್ನಜ್ಜಾ ನನ್ನ ಮನ್ಸ್ ಚಡಪಡ್ಸಿದೆ, ಈ ಲೋಕಲಿ ನಾ, ನೀ, ನನ್ನ ಅವ್ವ, ಅಪ್ಪ, ಹೆಣ್ಣ್ ಯಶೋಧರೆ, ಕೂಸು ರಾಹುಲ ಇಸ್ಟೆನಾ? ನಮ್ಮ ಕೋಟೆನ ಹೊರೆಗೆ ಯಾರೂ ಇಲ್ಲೆನಾ? ನನ್ನ ಮನ್ಸ್ ತಡಿಯೊದ್ಲೆ, ಈ ಬಂಧನ ಸಾಕ್, ನಂಗೆ ಹೊರೆಗೆ ಏನುಟ್ಟು ನೋಡೊಕು? ಚೆನ್ನಜ್ಜಾ ನನ್ನ ಹೊರೆಗೆ ಕಕರ್ಂಡ್ ಹೋದಿಯನಾ?

ಚೆನ್ನ : ಇಲ್ಲೆ ರಾಜಕುಮಾರ, ಮಹರಾಜರ ಅಪ್ಪಣೆ ಸಿಕ್ಕದೆ ನಿಮ್ಮ ಹೊರೆಗೆ ಹೇಂಗೆ ಕಕರ್ಂಡ್ ಹೋಕೆ ಆದೆ?

ಸಿದ್ಧಾರ್ಥ : ಸೆರಿ ಹಂಗಾರೆ, ನಾನೇ ಅಪ್ಪನ ಕೇಳ್ನೆ. ನಾಳೆ ಹೊರೆಗೆ ಹೋಕೇ ರಥನ ರೆಡಿ ಮಾಡಿ ಇಸ್. (ಹೀಂಗೆ ಹೇಳಿ ಒಳೆಗೆ ಹೋತು)

(ಹಿನ್ನೆಲೆ ಧ್ವನಿ) : ಮರ್ದಿನ ಸಿದ್ಧಾರ್ಥ ಕಪಿಲವಸ್ತುನ ನೋಡಿ ಬಾಕೆ ಅಪ್ಪನ ಅಪ್ಪಣೆ ಪಡ್ತ್, ಕಪಿಲವಸ್ತುನ ಸಿಂಗರ್ಸಿ, ರಾಜಕುಮಾರ ಸಿದ್ಧಾರ್ಥಂಗೆ ಯಾವುದೇ ದುಃಖದ, ಕಷ್ಟದ ನೆರ್ಳ್ ಕೂಡಾ ಬೀಳದ ಹಾಂಗೆ ನೋಡಿ ಕಣಕೂಂತ ರಾಜ ಶುದ್ಧೋಧನ ಪ್ರಜೆಗಳಿಗೆ ಆಜ್ಞೆ ಮಾಡ್ತ್! ಆದರೆ ವಿಧಿಯ ಆಟ ಬೇರನೇ ಇತ್ತ್

ಸಿದ್ಧಾರ್ಥ : ಚೆನ್ನಜ್ಜಾ... ಓ ಚೆನ್ನಜ್ಜಾ...

ಚೆನ್ನ : ಬಂದೆ ರಾಜಕುಮಾರ

ಸಿದ್ಧಾರ್ಥ : ರಥ ರೆಡಿಯಾಗಿ ಉಟ್ಟಾ?

ಚೆನ್ನ : ದಯಮಾಡ್ಸಿ ರಾಜಕುಮಾರ. (ರಾಜಕುಮಾರ ತನ್ನ ರಾಜ್ಯದ ಪ್ರಜೆಗಳ ನೋಡ್ನೆಂತ ಹೇಳುವ ಕುಸಿಲಿ ಹೊರ್ಟತ್)

ಸಿದ್ಧಾರ್ಥ : ಚೆನ್ನಜ್ಜಾ... ಎಲ್ಲೆಲ್ಲಿಯೂ ಕುಸಿನ, ಸುಖದ ಸಂತೋಸದ ಸಂಗ್ತಿನೇ ಕಂಡದೆ ಅಲ್ಲಾ? ಈ ಲೋಕಲಿ ಕಸ್ಟ, ದುಃಖಂತೇಳ್ದು ಇಲ್ಲೆನಾ?

ಚೆನ್ನ : (ಮರ್ಕಂದ, ನೆಗಾಡ್ತ್) ಅಲ್ಲಿ ನೋಡು ರಾಜಕುಮಾರ. (ಎದ್‌ರ್‌ಗೆ ಒಬ್ಬ ಬೆನ್ನ್ ಬೊಗ್ಗಿದ, ಮೈ ಎಲ್ಲಾ ಸುಕ್ಕು ಕಟ್ಟಿದ, ಗಡ್ಡ ಮೀಸೆ ತಲೆಕೂದೊಲು ಎಲ್ಲಾ ಬೆಳ್ಳಾಂಗಾದ ನಡಿಯಕೆ ಬೊತ್ತದ ಅಜ್ಜ ಒಬ್ಬ ಬಾತಿತ್)

ಸಿದ್ಧಾರ್ಥ : (ಅಜ್ಜನ ನೋಡಿ ಹದ್ಕಿ ಬೀತ್) ಚೆನ್ನಜ್ಜಾ, ಇದೇನ್ ಹಾಂಗೆ ಇಂವ ಮೊನ್ಸ ತಾನೆ? ಆದರೂ ಮೈ ಬೊಗ್ಗಿಟ್ಟು, ಕೂದಲ್ ಬೆಳ್ಳಂಗಾಗುಟ್ಟು, ಚರ್ಮ ಎಲ್ಲಾ ನೆರಿಕಟ್ಟಿಟ್ಟು ಯಾರ್ ಇಂವ? ಏನ್ ಕತೆ ಹೇಳ್ ಚೆನ್ನಜ್ಜಾ... ಹೇಳ್.

ಚೆನ್ನ : ಇವನ ತೊಂಡ, ಅಜ್ಜಂತ ಹೇಳುವೆ ರಾಜಕುಮಾರ, ಮೊನ್ಸ ಹುಟ್ಟಿ ಕೂಸಾಗಿದ್ದ್, ಮಕ್ಕಾಗಿ ಬೆಳ್ದ್, ಯವ್ವನ ದಾಟಿದಮೇಲೆ ಮುಂದೆ ಅಜ್ಜ ಆದವೆ ಆಗ ಮೊನ್ಸನ ಕೂದಲ್ ಬೆಳ್ಳಂಗಾದೆ, ಚರ್ಮ ನೆರಿಕಟ್ಟಿದೆ, ಬೆನ್ನ್ ಬೊಗ್ಗಿದೆ, ಕಣ್ಣ್ ಸೇರಿ ಕಾಂಬೊದುಲ್ಲೆ. ಅಕೇರಿಗೊಂದು ದಿನ ಮೈನ ಸಕ್ತಿ ಎಲ್ಲಾ ಹೋಗಿ ಸತ್ತ್ ಹೋದೆ. ಇದ್ ಪ್ರಕೃತಿ ನಿಯಮ. ಈ ಲೋಕಲಿ ಎಲ್ಲವೂ ನಾ, ನೀ, ನಿನ್ನ ಅಪ್ಪ ಅವ್ವ, ಹೆಣ್ಣ್, ಮಂಜ ಎಲ್ಲವೂ ಹೀಂಗೆ ನಾಳೆ ನಾ, ನಾಡ್ದ್ ನಿನ್ನ ಅಪ್ಪ, ಮತ್ತೆ ನಿನ್ನ ಅವ್ವ, ಆ ಮೇಲೆ ನೀ, ನಿನ್ನ ಹೆಣ್ಣ್ ಎಲ್ಲವೂ ಒಂದಲ್ಲ ಒಂದು ದಿನ ಹೋಕೇ

ಹೋಕು. ಇದ್ ವಿಧಿ ನಿಯಮ.

ಸಿದ್ಧಾರ್ಥ : ಎಂತ ಹೇಳ್ದ ಚೆನ್ನಜ್ಜಾ, ನಾಳೆ ನೀ, ನಾಡ್ದ್ ನನ್ನ ಅಪ್ಪ, ಮತ್ತೆ ಅವ್ವ, ಆಮೇಲೆ ನಾ ಎಲ್ಲವೂ ಈ ಲೋಕ ಬುಟ್ಟ್ ಹೋಕಾ? ಅಯ್ಯೋ ದೇವ್ರೇ, ನಂಗೊಂದೂ ಗೊತ್ತೇ ಇಲ್ಲೆಲ್ಲಾ? ಏನ್ ಕತೆ ಇದ್!? ನಡಿ ಮುಂದೆ ಪೋಯಿ ಚೆನ್ನಜ್ಜಾ. (ಹಂಞಮುಂದೆ ಹೋಕನ ಕುಷ್ಟ ರೋಗಿ ಒಬ್ಬ ಕಾಂಬಕೆ ಸಿಕ್ಕಿದೆ) ಚೆನ್ನಜ್ಜಾ ಯಾರಿದ್? ಮೈಯೆಲ್ಲಾ ಕೊಳ್ತ್ ವಾಸನೆ ಬಂದದೆ ಅಲ್ಲಾ? ಯಾರ್ ಇಂವ ಚೆನ್ನಜ್ಜಾ ಯಾರ್?

ಚೆನ್ನ : ಹೆದ್ರ್ ಬೇಡ ರಾಜಕುಮಾರ, ಇಂವ ಒಬ್ಬ ಕುಷ್ಟ ರೋಗಿ. ಹಿಂದೆನ ಜನ್ಮಲಿ ಮಾಡ್ದ ಪಾಪಂದ ಈ ಜನ್ಮಲಿ ಈ ರೀತಿ ನರ್ಕ ಬಂದ್ಕಂಡ್ ನರ್ಳಿ ನರ್ಳಿ ಸಾಯೊಕಾದೆಂತ ಹೇಳುವೆ. ನಾ ನೀ ಎಲ್ಲಾ ಈ ಜನ್ಮಲಿ ಪಾಪಗಳ ಮಾಡ್ರೆ ಮುಂದೆನ ಜನ್ಮಲಿ ಕುಷ್ಟರೋಗಿ ಆಗಿನೋ, ಕುಂಟನಾಗಿನೋ, ಕುರ್ಡನಾಗಿನೋ ಹುಟ್ಟೊಕಾದೆ!

ಸಿದ್ಧಾರ್ಥ : ಅಯ್ಯೋ... ದೇವ್ರೆ, ಇವಂಗೆ ಇದರ್ಂದ ಮುಕ್ತಿನೇ ಇಲ್ಲೆನಾ ಚೆನ್ನಜ್ಜಾ?

ಚೆನ್ನ : ಉಟ್ಟು ರಾಜಕುಮಾರ ಉಟ್ಟು, ಮೊನ್ನನ ಆಯ್ಸು ಮುಗ್ದ್ ಕಾಲನ ಕರೆಗೆ ಓಗೊಟ್ಟ್ ಕಾಣದ ಲೋಕಕ್ಕೆ ಹೋಕನೇ ಇದಕ್ಕೆ ಮುಕ್ತಿ.

ಸಿದ್ಧಾರ್ಥ : ಅಯ್ಯೋ ದೇವ್ರೇ... ನನ್ನಿಂದ ನೋಡಿಕೇ ಬೊತ್ತ್ ಚೆನ್ನಜ್ಜಾ ನೋಡಿಕೇ ಬೊತ್ತ್, ... ಮುಂದೆ ಪೋಯಿ ಚೆನ್ನಜ್ಜಾ ಮುಂದೆ ಪೋಯಿ... (ಮುಂದೆ ಹೋಕನ ಯಾರೋ ಒಬ್ಬ ಸತ್ತವನ ಹೆಣದ ಮುಂದೆ ಕುದ್ದ್ ಕಂಡ್ ಮರ್ಡವರ ನೋಡ್ದೆ.) ಏನ್ ಚೆನ್ನಜ್ಜಾ ಇದ್? ಇವೆಲ್ಲಾ

ಯಾಕೆ ಹಿಂಗೆ ಮರ್ಟವೆ?

ಚೆನ್ನ : ಹಾಂ... ರಾಜಕುಮಾರ ಮೊನ್ನನ ಆಯಿಸ ಮುಗ್ದ್, ಪರಲೋಕಕ್ಕೆ ಅಂವ ಹೋಗುಟ್ಟು, ಅದಕ್ಕೆ ಅವನ ಬಂಧುಗ ಎಲ್ಲಾ ಬೇಜಾರಲಿ ಹಂಗೆ ಮರ್ಟವೆ. ನಾ, ನೀ, ನಿನ್ನ ಅಪ್ಪ ಅವ್ವ ಎಲ್ಲವೂ ಒಂದಲ್ಲ ಒಂದು ದಿನ ಪರಲೋಕಕ್ಕೆ ಹೋಕೇ ಹೋಕು, ಇದ್ ವಿಧಿ ನಿಯಮ ರಾಜಕುಮಾರ.

ಸಿದ್ಧಾರ್ಥ : ಎಂತ ಹೇಳ್ದ ಚೆನ್ನಜ್ಜ ನೀ, ನೀ, ನಾ, ಎಲ್ಲವೂ ಒಂದಲ್ಲ ಒಂದು ದಿನ ಹೀಂಗೆ ಸತ್ತ್ ಹೋದವೆನಾ? ಅಯ್ಯೋ ದೇವ್ರೇ! ನಂಗೆ ಇದೆಲ್ಲಾ ತಡಿಯಕೇ ಆದುಲ್ಲೆ! ಪೋಯಿ ಚೆನ್ನಜ್ಜಾ, ಪೋಯಿ ಇಲ್ಲಿಂದ. (ಅಂದ್ ರಾತ್ರೆ ರಾಜಕುಮಾರ ಸಿದ್ಧಾರ್ಥ ತನ್ನ ಅರಮನೆಲಿ ಕುದ್ದ್ ಕಂಡ್ ಯೋಚನೆ ಮಾಡ್ದೆ)

(ತನ್ನಸ್ಟಕೆ) ನಾ ಎಂತೆಂತಾ ದೃಷ್ಯಗಳ ನೋಡ್ದೆ ನಡೆಕೆ ಬೊತ್ತದ ಅಜ್ಜ, ಕುಷ್ಟರೋಗಿ, ಸಾವು... ಹೆಣ! ಅಯ್ಯೋ ಈ ಲೋಕದ ಕತೆ ಎಂತದ್ದ್, ಈ ಪ್ರಪಂಚನೇ ನಶ್ವರ! ಇಂತಾ ಲೋಕಲಿ ಇರ್ದಾದರೂ ಯಾಕೆ? ನಾ ಸರ್ವಸಂಗ ಪರಿತ್ಯಾಗಿಯಾಕು! ಸನ್ಯಾಸಿಯಾಕು!! ಲೋಕದ ಜನರ ಉದ್ಧಾರ ಮಾಡೊಕು. ಅಜ್ಞಾನದ ಅಂಧಕಾರಲಿ ತೊಳಲಾಡ್‌ತ್ತಿರುವವರ ನಾ ಉದ್ಧರಿಸೊಕು. ಮೋಕ್ಷದ ದಾರಿನ ತೋರ್ಸೊಕು. (ಹೀಂಗೆ ಅಂದ್ ರಾತ್ರೆ ಸಿದ್ಧಾರ್ಥ ಸನ್ಯಾಸಿಯಾಕೆ ನಿರ್ಧಾರ ಮಾಡ್ದೆ.) ಚೆನ್ನಜ್ಜಾ ...ಓ ಚೆನ್ನಜ್ಜಾ...

ಚೆನ್ನ : ಏನ್ ಸಣ್ಣ ದೊರೆ? ಯಾಕೆ ಕರ್ದರಿ?

ಸಿದ್ಧಾರ್ಥ : ಚೆನ್ನಜ್ಜಾ ನಂಗೆ ಇನ್ನ್ ಈ ಲೋಕದ ಬಂಧನ ಸಾಕ್! ಹೆಣ್ಣ್, ಮಂಜ... ಅಪ್ಪ ಅವ್ವ... ಎಲ್ಲನೂ ಬುಟ್ಟ್

ನಾ ಸನ್ಯಾಸಿಯಾಕೆ ಹೋನೆ, ಇಂದ್ ಕತ್ತಲೆಗೆ ರಥನ ರೆಡಿಮಾಡಿ ಇಸಿಕಾ.

ಚೆನ್ನ : ರಾಜಕುಮಾರ, ನೀವು ಸನ್ಯಾಸಿಯಾದೋ? ನಿಮ್ಮನ್ನೇ ನಂಬಿ ಬಂದ ಹೆಣ್ಣ್, ಪ್ರೀತಿನ ಮಂಜ ರಾಹುಲ, ಪ್ರಾಯದ ಅಪ್ಪ, ಅವ್ವ, ಈ ರಾಜ್ಯ, ಈ ರಾಜಭೋಗ, ಸುಖ ಸಂತೋಸ ಇದರೆಲ್ಲಾ ಬುಟ್ಟ್ ಕಾಡಿಗೆ ಹೋದರೆನಾ?

ಸಿದ್ಧಾರ್ಥ : ಚೆನ್ನಜ್ಜಾ... ಕೇಳಿಕೆ ಬೊತ್ತು ನಿನ್ನ ಮಾತ್ ಹೆಣ್ಣ್, ಮಕ್ಕ, ಅಪ್ಪ ಅವ್ವಾಂತ ಈ ಪ್ರೀತಿನ ಸಂಕೋಲೆಲಿ ಸಿಕ್ಕಿ ನನ್ನ ಜೀವನ ನುಚ್ಚುನೂರಾಕೋ ಹೇಳ್? ನಾ ರಾಜಕುಮಾರ ಆಜ್ಞೆಮಾಡ್ತಾ ಒಳೆ ರಥನ ತಕಂಡ್ ಬಾ.

ಚೆನ್ನ : ರಾಜಕುಮಾರ ಇನ್ನೊಮ್ಮೆ ಯೋಚನೆ ಮಾಡಿ... ಒಬ್ಬನೇ ಮಂಜ ನೀವು, ನಿಮ್ಮ ಅವ್ವ ಅಪ್ಪಂಗೆ. ನೀವು ಮನೆ ಬುಟ್ಟ್ ಹೋದರೆ ನಿನ್ನ ಅವ್ವ ಅಪ್ಪ ಪ್ರಾಣನೇ ಬುಡುವೊ, ನಮ್ಮ ಹೆಣ್ಣ್ ಎದೆ ಒಡ್ದ್ ಸಾಯೊದು, ನಿಮ್ಮ ಚೆನ್ನಜ್ಜ ನಾನೂ ಒಳಿಕಿಲ್ಲೆ. ಹೋಗ್ಬೇಡಿ ರಾಜಕುಮಾರ, ಹೋಗ್ಬೇಡಿ.

ಸಿದ್ಧಾರ್ಥ : ಚೆನ್ನಜ್ಜಾ... ನಾ ನಿನ್ನ ಯಜ್ ಮಾನ ಹೇಳ್ತಾ ಒಳೆ, ಹೋಗು ರಥನ ತಂಬ.

ಚೆನ್ನ : ಸರಿ ರಾಜಕುಮಾರ (ಮನ್ಸಿಲ್ಲದ ಮನ್ಸ್‌ಂದ ಚೆನ್ನ ರಥನ ತಾಕೆ ಹೋದೆ)

ಹಿನ್ನೆಲೆ ಧ್ವನಿ : ...ಅಂದ್ ಕುರುಕ್ಷೇತ್ರ ಯುದ್ಧಲಿ ಭಗವಾನ್ ಶ್ರೀಕೃಷ್ಣ ಅರ್ಜುನಂಗೆ ಹೇಳ್ತ್ ಧರ್ಮದ ಇಳುಗಡೆಯಾಗಿ ಅಧರ್ಮದ ಏರಿಕೆಯಾಕನ ದುಷ್ಟರ ಶಿಕ್ಷಿಸಿ ಶಿಷ್ಟರ ರಕ್ಷಿಸಿಕೆ ಧರ್ಮನ ಕಾಪಾಡಿಕೆ ನಾ ಪ್ರತಿ ಯುಗಲೂ

ಹುಟ್ಟಿ ಬನ್ನೇಂತ

**ಯದಾ ಯದಾ ಧರ್ಮಸ್ಯ**

**ಗ್ಲಾನಿರ್ಭವತಿ ಭಾರತ**

**ಅಭ್ಯುತ್ಥಾನ ಮ ಧರ್ಮಸ್ಯ**

**ತದಾತ್ಮಾನಂ ಸೃಜಾಮ್ಯಹಂ**

**ಪರಿತ್ರಾಣಾಯಾ ಸಾಧೂನಾಂ**

**ವಿನಾಶಾಯ ಚ ದುಷ್ಟ ತಾ**

**ಧರ್ಮ ಸಂಸ್ಥಾಪನಾರ್ಥಾಯ**

**ಸಂಭವಾಮಿ ಯುಗೇ ಯುಗೇ**

ಸಿದ್ಧಾರ್ಥ ದೀಪದ ಮಂಕ್ ಬೆಳ್ಕ್‌ಲಿ ತನ್ನ ಹೆಣ್ಣ್ ಯಶೋಧರೆನ ...ಮುದ್ದು ಕೂಸು ರಾಹುಲನ ಮೋರೆನೊಮ್ಮೆ ನೋಡಿ ಹೋನೇಂತ ಹೋದೆ, ಎಲ್ಲಿ ಯಶೋಧರೆ ಸಿದ್ಧಾರ್ಥನ ತಡ್ದ್ ಬುಡ್ದೋಂತ ಹೆದ್ರಿ ವಿಧಿ ಯಶೋಧರೆನ ಗಾಢ ನಿದ್ದೆಲಿ ಮುಳ್ಗ್ ಸಿತ್ತ್! ಹೆಣ್ಣ್‌ನ, ಮುದ್ದು ಮಂಜನ ಮೋರೆನೊಮ್ಮೆ ಕಣ್ ತುಂಬಾ ನೋಡ್ತ್ ಸಿದ್ಧಾರ್ಥ! ಮತ್ತೆ ಗಟ್ಟಿ ಮನ್ಸ್ ಮಾಡಿ ಅಲ್ಲಿಂದ ಮೆಲ್ಲೆ ಹೊರ್ಟತ್ತ್!

ಚೆನ್ನ : ಬಾ ರಾಜಕುಮಾರ ರಥ ತಕಂಡ್ ಬಂದೊಳೆ

ಸಿದ್ಧಾರ್ಥ : ಪೋಯಿ ಚೆನ್ನಜ್ಜಾ, ಕಾಡ್ನ ದಾರಿಗೆ! (ಹಂಞ ದೂರ ಹೋದ ಮೇಲೆ) ಇನ್ನ್ ನೀ ವಾಪಾಸ್ ಹೋಗು. ಚೆನ್ನಜ್ಜಾ, ನನ್ನ ಅವ್ವ ಅಪ್ಪಂಗೆ ಹೇಳ್ ಸಿದ್ಧಾರ್ಥ ಲೋಕೋದ್ಧಾರಕ್ಕೆ ಸನ್ಯಾಸಿಯಾಕೆ ತಪಸ್ಸಿಗೆ ಕಾಡಿಗೆ ಹೋತೂಂತ. ಯಶೋಧರೆನ ತುಂಬಾ ಕೇಳ್ದೆಂತ ಹೇಳ್. (ಹೀಂಗೆ ಹೇಳ್ದ ಸಿದ್ಧಾರ್ಥ ರಥಂದ ಇಳ್ದ್ ಕಾಡಿಗೆ ಹೋತ್)

ಹಿನ್ನೆಲೆ ಧ್ವನಿ : ... ಪಾಪ ಚೆನ್ನಜ್ಜ ತನ್ನ ಪ್ರೀತಿನ ರಾಜಕುಮಾರ

ಇಂದ್ ಬಾದು... ನಾಳೆ ಬಾದೂಂತ... ಕಾತ್... ಕಾತ್... ಕಾತ್! ಆದರೆ ಸಿದ್ಧಾರ್ಥ ವಾಪಾಸ್ ಬಾತೇಯಿಲ್ಲೆ! ರಾಜಕುಮಾರ ಸಿದ್ಧಾರ್ಥನ ಬಾದೂಂತ ಕಾದ್ಕಂಡೇ... ಒಂದು ದಿನ... ಚೆನ್ನಜ್ಜ ಪ್ರಾಣ ಬುಟ್ಟತ್!!!

ಸಿದ್ಧಾರ್ಥ ಬೋಧಿ ಮರದ ಬುಡಲಿ ಕುದ್ದ್ ತಪಸ್ ಮಾಡ್ತ್! ಒಂದಲ್ಲ... ಎರಡಲ್ಲಾ... ಹನ್ನೆರ್ಡ್ ವರ್ಸ!!! ಈ ಕಠಿಣ ತಪಸ್‌ಂದ ಸಿದ್ಧಾರ್ಥಂಗೆ ಜ್ಞಾನೋದಯ ಆತ್! ಸಿದ್ಧಾರ್ಥ ಗೌತಮ ಬುದ್ಧ ಆತ್!!! ಲೋಕದ ಜನರ ಅಜ್ಞಾನದ ಅಂಧಕಾರಂದ ಜ್ಞಾನದ ಬೆಳ್ಕಿಗೆ ತಂದ್ ಮೋಕ್ಷದ ದಾರಿನ ತೋರ್ಸಿದ ಮಹಾ ಪುರುಸ ಬುದ್ಧ!!! ಅಂವ ಲೋಕಕ್ಕೆ ಕೊಟ್ಟ ಸಂದೇಶ ಮೂರು

**ಬುದ್ಧಂ ಶರಣಂ ಗಚ್ಛಾಮಿ!**

**ಸಂಘಂ ಶರಣಂ ಗಚ್ಛಾಮಿ!**

**ಧರ್ಮಂ ಶರಣಂ ಗಚ್ಛಾಮಿ!!**

* * * ತೆರೆ * * *

# ಸೀತೆನ
# ಅಪರ್ಸಿದ್

ಪಾತ್ರಗ:–

1. ಸೀತೆ
2. ಲಕ್ಷ್ಮಣ
3. ಸನ್ಯಾಸಿ ರಾವಣ

# ಪೀಠಿಕೆ

ಅಪ್ಪನ ಮಾತ್ನ ಮೀರದ ಶ್ರೀರಾಮ ಎಲ್ಲಾ ರಾಜ ಸುಖಭೋಗಗಳ ಬುಟ್ಟ್ ಅಯ್ಯೋಧ್ಯೆಂದ ದಂಡಕಾರಣ್ಯಕ್ಕೆ ಬಾತ್. ಗಂಡನೇ ದೇವ್ರುಂತ ತಿಳ್ಕಂಡ ಸೀತೆ, ಅಣ್ಣನ ನೆರ್ಳ್‌ನಾಂಗೆ ಹಿಂದ್ಕಂಡ್ ಬಾವ ತಮ್ಮ ಲಕ್ಷ್ಮಣನೊಟ್ಟಿಗೆ ಪಂಚವಟಿಲಿ ಪರ್ಣಕುಟೀರನ ಮಾಡಿಕಂಡ್ ಇದ್ದವೆ.

ಇತ್ತ ಲಂಕೆನ ರಾಜ ರಾವಣ ತಂಗೆ ಸೂರ್ಪನಕಿನ ಕಪಟ ಮಾತಿಗೆ ಮೊರ್ಲಾಗಿ ಸೀತೆನ ಅಪರ್ಸಿಕೆ ನಿಗಂಟ್ ಮಾಡ್ದೆ. ನನ್ನ ಕೆಲ್ಸಕ್ಕೆ ಸಾಯ ಮಾಡೊಕೂಂತ ಮಾಂವ ಮಾರೀಚನ ಕಾಡಿ, ಬೇಡಿ, ಹೆದ್ರ್ಸಿದೆ. ರಾವಣನ ಕೈಲಿ ಸಾಯೊದರ್‌ಂದ ಶ್ರೀ ರಾಮಚಂದ್ರನ ಕೈಲಿ ಸಾಯೋದೇ ಒಳ್ಳೆದ್‌ಂತ ಗ್ರೇಸಿದ ಮಾರೀಚ ಚಿನ್ನದ ಜಿಂಕೆನ ರೂಪ ತಾಳ್ತ್. ಈ ಮಾಯಾ ಜಿಂಕೆ ಸೀತೆಗೆ ಕಾಂಬಹಾಂಗೆ ಓಡಿಕಂಡ್, ಹಾರಿಕಂಡ್ ಇತ್ತ್. ಅದರ ಪೊರ್ಲುಗೆ ಮೊರ್ಲಾದ ಸೀತೆ ಆ ಜಿಂಕೆನ ಹಿಡ್ಕಂಡ್ ಬನ್ನಿಂತ ಶ್ರೀ ರಾಮನ ಬೇಡಿಕಣ್ತ್. ಲಕ್ಷ್ಮಣ ಅದ್ ನಿಜವಾದ ಜಿಂಕೆ ಅಲ್ಲಾ ಮಾರೀಚನ ಮಾಯೆಂತ ಹೇಳ್ರೂ, ರಾಮ ತನ್ನ ಹೆಣ್ಣ್‌ನ ಆಸೆನ ಈಡೇಸೊರ್ಕೂಂತ ಆ ಚಿನ್ನದ ಜಿಂಕೆನ ತಾಕೆ ಹೋತ್. ಆ ಮಾಯೆನ ಜಿಂಕೆ ರಾಮನ ಬಾಣಕ್ಕೆ ಹೆದ್ರಿ ಬಾನಲಿ ಹಾರಾಡ್ದೇನೋಂತ

ಗ್ರೇಸುವಾಂಗೆ ಕಂಡ್ ಕಂಡ್ ರಾಮನ ಆಸ್ರಮಂದ ತುಂಬಾ ದೂರ ಹೋವಾಂಗೆ ಮಾಡ್ತ್. ಸಿಟ್ಟ್ ಬಂದ ರಾಮ ಸೂರ್ಯಕಿರಣದಾಂಗಿರುವ ಬಾಣನ ಬುಟ್ಟತ್ ಇತ್ತ ಪರ್ಣಕುಟೀರಲಿ ಸೀತೆ ಶ್ರೀ ರಾಮ ಚಿನ್ನದ ಜಿಂಕೆನ ಹಿಡ್ದ್ ತಾದೂಂತ ಕಾದ್ಕಂಡ್ ಇರ್ಕನ... ಇನ್ನು ನಾ ಸಾಯೋದೇ ನಿಗಂಟ್ಂತ ಗ್ರೇಸಿದ ಮಾರೀಚ ಲಕ್ಷ್ಮಣನ ಸೀತೆಂದ ಬೇರೆ ಮಾಡಿಕೆ ರಾಮನ ಸೊರದಾಂಗೆ... ಹಾ ಸೀತೆ... ಓ ಲಕ್ಷ್ಮಣಂತ ಬೊಬ್ಬೆ ಹೊಡ್ತ್. ಶ್ರೀ ರಾಮನ ಸೊರದಾಂಗೆ ಬೊಬ್ಬೆ ಕೇಳ್ದ ಸೀತೆ...

ಸೀತೆ : ಲಕ್ಷ್ಮಣಾ, ನನ್ನ ಗಂಡಂಗೆ ಏನೋ ತೊಂದರೆ ಆಗುಟ್ಟು ಖಂಡಿತ, ಹೋಗು, ಬೇಗ ಹೋಗು... ಅಯ್ಯೋ ನನ್ನ ರಾಮಂಗೆ ಏನಾಗುಟ್ಟೋ ಏನೊ...?

ಲಕ್ಷ್ಮಣ : ಅತ್ತಿಗೆ ಹೆದ್ರ್ ಬೇಡಿ, ಇದೆಲ್ಲಾ ನಾ ಹೇಳ್ದಾಂಗೆ ಇಲ್ಲಿನ ರಾಕ್ಸಸರ ಮಾಯೆನ ಬೊಬ್ಬೆ, ನನ್ನಣ್ಣನ ಸೊರ ಅಲ್ಲ

(ಪುನಾ ಹಾ ಸೀತೆ... ಓ ಲಕ್ಷ್ಮಣಾ...ಂತ ಬೊಬ್ಬೆ ಕೇಳ್ದ್)

ಸೀತೆ : ನಿಂಗೆ ಬರೀ ಬ್ರಾಂತಿ ಲಕ್ಷ್ಮಣ, ಕೆಬಿ ಕೊಟ್ಟ್ ಕೇಳ್ದಾ? ಅದ್ ನಿನ್ನಣ್ಣನ ಸೊರನೇ. ಅಯ್ಯೋ ಇನ್ನೇನ್ ಮಾಡ್ದು, ಬೇಗ ಹೋಗು, ಇದೇನ್ ತಲೆ ಸೆರಿ ಇಲ್ಲದವರಾಂಗೆ ನಿತ್ತೊಳ, ನಿಂಗೆ ದಮ್ಮಯ್ಯ ಹೋಗು, ಬೇಗ ಹೋಗು.

ಲಕ್ಷ್ಮಣ : ನಿಮ್ಮ ದಮ್ಮಯ್ಯ ಅತ್ತಿಗೆ, ನಾ ಹೇಳ್ದೊರ ಕೇಳಿ ಇದ್ ಖಂಡಿತಾ ಅಣ್ಣನ ಸೊರ ಅಲ್ಲಾ, ರಾಕ್ಸಸರ ಮಾಯೆನ ಸೊರ, ನಿಮ್ಮನೇ ನೀವು ಏಕೆ ವಂಚಿಸಿಕಂಡರೆನೊ ಗೊತ್ಲೆ, ಏನೇ ಆಗಲಿ ಅಣ್ಣನ ಮಾತ್ನ ಮೀರೀ ನಿಮ್ಮ ರಕ್ಷಣೆನ ಬುಟ್ಟ್ ನಾ ಎಲ್ಲಿಗೂ ಹೋಕಿಲ್ಲೆ...

ಸೀತೆ : ಲಕ್ಷ್ಮಣಾ ನಿನ್ನ ಕಾಲ್ ಹಿಡ್ದನೆ, ನನ್ನ ಗಂಡನ ರಕ್ಷಿಸ್ ಹೋಗು... ಹೋದುಲ್ಲೆನಾ... ಅಯ್ಯೋ... ಗ್ರಾಚಾರನೇ...

ನೀ ವಂಚಕ, ವಿಸ್ವಾಸ ದ್ರೋಹಿ, ನಡಿ ಇಲ್ಲಿಂದ... ನೀ ಇಲ್ಲಿಯೇ ಹಿಂಗೇಕೆ ಹೋಗದೆ ಒಳಾ ನಂಗೀಗ ಗೊತ್ತಾತ್, ನನ್ನ ಮೇಲೆನ ಮೋಹಂದ ನಿನ್ನಣ್ಣನ ಸಾಯಕ್ಕೆ ಹೋಗದೆ ಕುದ್ದೊಳ... ಪಾಪಿ... ವಂಚಕ... ದ್ರೋಹಿ... ನಡಿ ಇಲ್ಲಿಂದ.

ಲಕ್ಷ್ಮಣ : ಅತ್ತಿಗೇ... ರಾಮ ರಾಮ... ಅಯ್ಯೋ ಎಂತಾ ಮಾತ್ಂತ ಆಡ್ರೆ, ಯಾರ್ನ ನಾ ನನ್ನ ಹೆತ್ತವ್ವಂದ ಹೆಚ್ಚಿ ಗೌರವಂದ ಕಾಣ್ತಿದ್ದನೋ ಆ ಜಗನ್ಮಾತೆಂದ ಇಂತಾ ಮಾತೇ? ಯಾವ ಅತ್ತಿಗೆನ ಪಾದಪದ್ಮಗಳ ಇರ್ಲ್ ಹಗಲ್ ಪೂಜೆ ಮಾಡಿಕಂಡಿದ್ದನೋ ಅಂತಾ ದೇವತೆನ ಬಾಯಿಂದ ಇಂತಾ ಮಾತೇ? ಯಾವ ಅಣ್ಣನ ಪ್ರೀತಿನ ಸುಳಿಗೆ ಸಿಕ್ಕಿ, ಹೆತ್ತವ್ವನ, ಹೊತ್ತ ಭೂಮಿನ, ಕಡೆಗೆ ಕೈಹಿಡ್ದ ಹೆಣ್ಣ್ ನೂ ಬುಟ್ಟ್ ನೆರಳ್ನಾಂಗೆ ಇವರ್ನೇ ಅನ್ಸರ್ಸಿ ವನವಾಸಕ್ಕೆ ಬಂದ ಈ ಲಕ್ಷ್ಮಣ, ಆ ನನ್ನ ರಾಮ ಜಗದೇಕ ವೀರ ರಾಮನ ಹೆಣ್ಣ್ಂದಲೇ ಇಂತಾ ನಿಂದನೆನ ಮಾತ್ಗಳ ಕೇಳೊಕಾತಲೇ, ಅಯ್ಯೋ... ಅತ್ತಿಗೆ... ಸಾಕ್...ದಮ್ಮಯ್ಯ... ನಿಮ್ಮ ನಾಲ್ಗೆಂದ ಇಂತಾ ಸುಳ್ಳುಗಳ ಹೇಳ್ಬೇಡಿ.

ಸೀತೆ : ಸಾಕ್ ಮಾಡ್, ದ್ರೋಹಿ ಸಾಕ್ ಮಾಡ್... ನೀ ಯಾಕೆ ನಮ್ಮೊಟ್ಟಿಗೆ ಬಂದಂತ ನಂಗೀಗ ಗೊತ್ತಾತ್, ನೀ ಬಂದದ್ ಅಣ್ಣನ ಮೇಲೆನ ಭಕ್ತಿಂದಲ್ಲ, ನನ್ನ ಮೇಲೆನ ಪ್ರೀತಿಂದ. ಸಾಕ್ ನಿನ್ನ ನಾಟಕ, ನಡಿ ಇಲ್ಲಿಂದ.

ಲಕ್ಷ್ಮಣ : ಅಯ್ಯೋ ದೇವ್ರೆ ಕಾದ ಕಬ್ಬಿಣದಾಂಗೆನ ಈ ನಿಮ್ಮ ಮಾತ್ಗಳ ಕೆಬಿಂದ ಕೇಳಿಕೆ ಬೊತ್ತ್, ರಾಜ ಋಷಿ ಜನಕ ಮಹಾರಾಜನ ಮಗಳ ಬಾಯಿಂದ ಇಂತಾ ನಿಷ್ಠುರದ ಮಾತ್ ಬಂದದೇಂತ ನಾ ಕನಸ್ ಮನ್ಸ್ ಲೂ ಗ್ರೇಸಿತ್ಲೆ. ಸಾಕತ್ತಿಗೆ ಸಾಕ್ ನಿಮ್ಮ ಮಾತ್! ತಾಯಿ

ಜಾನಕಿ ನಾ ಈಗಳೇ ಅಣ್ಣ ಇರುವಲ್ಲಿಗೆ ಹೊರ್ಟೆ, ಈಗ ಕಾಂಬತ್ತ ಇರುವ ಅಪಸಕುನಗಳ ನೋಡ್ರೆ ಮತ್ತೆ ನಿಮ್ಮ ನೋಡ್ನೆನೋ ಇಲ್ಲನೋಂತ ಹೆದ್ರಿಕೆ ಆದೆ. ಕ್ಷಮ್ಸಿ... ನೀವು ಒಳಗೆ ಹೋಗಿ (ಸೀತೆ ಒಳಗೆ ಹೋದಾಂಗೆ ಕಣ್ಣೀರ್ ಸುರ್ಸಿಕಂಡ್ ಲಕ್ಷ್ಮಣ ತನ್ನ ಬಾಣಂದ ಕುಟೀರದ ಹೊಸ್ಲ್‌ನ ಮುಂದೆ ಮೂರು ಗೆರೆಗಳ ಎಳ್ದ್, ಕಣ್ಣೀರ್ ಒರ್ಸಿಕಂಡ್) ಅತ್ತಿಗೆ ದಯೆಮಾಡಿ ಈ ಗೆರೆಗಳ ದಾಟಿ ಹೊರೆಗೆ ಬರ್ಬೇಡಿ ನಿಮ್ಮ ದಮ್ಮಯ್ಯ. (ಹೀಂಗೆ ಹೇಳಿ ಸೀತೆಗೆ ವಂದಿಸಿ, ತಾಯಿ ಹಸುನ ಬುಡುವ ಎಳೆ ಕರುನಾಂಗೆ ತಿರ್ಗಿ, ತಿರ್ಗಿ ನೋಡಿಕಂಡ್ ರಾಮ ಹೋದ ಕಡಗೇ ಹೊರ್ಟ್ ಹೋತು.)

ಸೀತೆ : (ತನ್ನಸ್ಟಕೆ) ಏನ್ ದುರ್ದಿನನೋ ಏನೋ? ಇದ್ದಕಿದ್ದ ಹಾಂಗೆ ಪಂಚವಾಯುವೇ ನಿಂತ ಹಾಂಗೆ ಕಂಡದೆ. ಮಾಗಿ ಕಾಲದ ಎಳೆ ಬಿಸ್ಲ್ ಮರಳ್ ಕಾಡ್ನ ಬಿಸ್ಲ್ ನಾಂಗೆ ಬೆಂದದೆ, ಇದೆಂತಾ ಇಪ್ರೀತ, ಕ್ಷಣ ಕ್ಷಣಕ್ಕೂ ಮೇಲೇರುವ ಸೂರ್ಯನ ಕರಾಳ ಬಾಹು ಆವರ್ಸಿದಾಂಗೆ ಎತ್ತಳೂ ಕರಿಮೋಡಗ ಮುತ್ತಿಟು, ಯಾಕೋ ಹೆದ್ರಿಕೆ ಆದೆ... ಏನಾದನೋ ನನ್ನ ಸಾಮಿ.

...ಲಕ್ಷ್ಮಣ ಅವರ ಕಂಡದೆನೋ ಇಲ್ಲೆನೊ... ಅಯ್ಯೋ ಗ್ರಾಚಾರನೇ... ಹೂಂ... ದೇವ್ರಿಗೆ ದೀಪನಾರ್ ಹೊತ್ತಿಸಿನೆ.

(ಹೀಂಗೆ ಹೇಳಿಕಂಡ್ ಸೀತೆ ಕುಟೀರದ ಒಳೆಗೆ ಹೋದೆ.)

(ಹಂಞ ಹೊತ್ತು ಕಳಿಯಕನ)

ಹಿನ್ನೆಲೆ ಧ್ವನಿ: ...ಧವಳಗಿರಿನೇ ಮಣಿಸಿ, ಶಿವನ ಆತ್ಮಲಿಂಗನನೇ ಭೂಮಂಡಲದ ಮೇಲೆ ಸ್ಥಾಪಿಸಿದ ಹತ್ತ್ ತಲೆನ ರಾವಣ ಸನ್ಯಾಸಿ ವೇಸಲಿ ಬಂದದೆ. ಜಿಡ್ಡ್ ಕಟ್ಟಿದ ಕೂದೊಲು, ಕಾವಿ ಉಡಿಗೆ, ಚೀಲಗ ಹೆಗ್ಲ್ ನ ಹಿಂದೆಗೂ ಮುಂದೆಗೂ ನೇತಾಡ್ಕಂಡ್ ಉಟ್ಟು, ರಟ್ಟೆ

ಮತ್ತೆ ಸೊಂಟಕ್ಕೆ ಕರಿ ಕಂಬುಳಿನಾಂಗೆನ ನೂಲುನ ಸುತ್ತಿಟು, ಹಣೆಗೆ ಮೂರು ನಾಮ, ಕೈಗೆ ಎದೆಗೆ ಬಸ್ಮದ ನಾಮ, ಬಾರೀ ಗಂಭೀರನಾಂಗೆ ಕಾಂಬ ರಾವಣ...

ರಾವಣ : (ತನ್ನಸ್ಟಕೆ) ರಾಮ ನೀ ನನ್ನ ಶಾಂತಿ ಸಾಮ್ರಾಜ್ಯನ ಹಾಳ್ ಮಾಡಿ ನಿನ್ನ ಆರ್ಯತ್ವನನೇ ವಿಷ ಪ್ರವಾಹದಾಂಗೆ ಮಾಡಿಯೊಳ. ಸೂರ್ಪನಕಿಗೆ ಅಪಮಾನ ಮಾಡಿ ರಕ್ತಪಾತಕ್ಕೆ ನನ್ನ ಎಳ್ಕಂಡ್ ತಂದೊಳ... ನೀ ದೊಡ್ಡ ರಾಜನಿರುವ... ದೊಡ್ಡ ದೇವ್ರೇ ಆಗಿರುವ... ಬಾರೀ ಸೂರನೇ ಆಗಿರುವ... ಹಹ... ಹಹಹ...ಮಹದೇವನ ಆತ್ಮಲಿಂಗನನೇ ಸಾಕ್ಷಾತ್ಕಾರ ಮಾಡಿಕಂಡ ಮತ್ತೊಬ್ಬ ಶಿವನೇ ಆದ ಈ ದಶಕಂಠ... ಹೂಂ... ನನ್ನ ರಾಕ್ಷಸ ಬಳಗನ ನಿನ್ನ ಬಾಣಂದ ಕೊಂದ್ ನಾನೇ ದೊಡ್ಡ ಸೂರಾಂತ ಹಿರಿ ಹಿರಿ ಹಿಗ್ಗಿಕಂಡ್ ಆದೆಸ್ಟ್ ಕಾಲ ಬೊದುಕುವ?

ನಿನ್ನ ಜೀವನದ ನೂಲು ಸಮ್ದ್ ಸಣ್ಣದಾಗಿ, ನಿನ್ನ ಬಾಳ್‌ನ ಬೆಳ್ಕ್ ಆರಿಹೋಗಿ, ನೀ ವಿರಹ ಬೇನೆಂದ ನರ್ಕ ಬಂದ್ ಬಂದ್ ಸತ್ತಿಯ ನೋಡು... ಇದಕ್ಕೆ ನಿನ್ನ ಹೆಣ್ಣ್ ಸೀತೆನ ಅಪಸರ್ದುದೇ ನಾ ಮಾಡುವ ಮುಂದೆನ ಕೆಲ್ಸ, ಅದೇ ನಾ ನಿಂಗೆ ಮಾಡುವ ಪ್ರತೀಕಾರ, ಚಿತ್ರಹಿಂಸೆ! ಹ... ಹ... ಹ... ಹ್ಹ... ಹ್ಹ... ಹ್ಹ... (ಂತ ಹೇಳಿಕಂಡ್ ಪರ್ಣ ಕುಠೀರದ ಲಕ್ಷ್ಮಣ ರೇಖೆನ ಹಕ್ಕಲೆ ಬಂದ್ ಅದರ ದಾಟಿಕೆ ಕಾಲ್ ಎತ್ತ್ ಕನ ಆ ಗೆರೆಗಳ್‌ಂದ ಚಟ ಚಟಾಂತ ಕಿಚ್ಚಿ ಹೊತ್ತಿದೆ. ನೇಚಿದ ಕಾಲ್ನ ಹಾಂಗೆ ಹಿಂದೆ ತಕಂಡ್, ಹುಸಿನೆಗೆ ಮಾಡಿಕಂಡ್) ಓ... ತಾರಕ ಮಂತ್ರಂದ ಹುಟ್ಟಿದ ಮಹಾ ರಕ್ಷಾ ರೇಖೆ... ರುದ್ರ ಕೋದಂಡ ವಿಜೇತ ಆ ರಾಮನ ಹೆಣ್ಣ್ ಈಗ ಒಬ್ಬೊಂಟಿ ...ಸೂರ್ಪನಕಿ ನೀ ಇನ್ನ್ ಹಸನ್ಮುಕಿ! ಈ

ಜಾನಕಿ ನನ್ನ ಊಳಿಗದಕ್ಕೆ ಕೆಲ್ಸಗಾರ್ತಿ... ಹ... ಹ... ಹ... ಹ್ಹ... ಹ್ಹ... ಹ.... (ಪ್ರಕಟ) ಭಿಕ್ಷಾಂ ದೇಹಿ... ಭಿಕ್ಷಾಂ ದೇಹಿ... ಭವತಿ ಭಿಕ್ಷಾಂ ದೇಹಿ... (ಹೀಂಗೆ ಹೇಳ್ಕನ ಸೀತೆ ಎದ್ರ್ ಬಂದ್)

ಸೀತೆ : ಸನ್ಯಾಸಿಗಳೇ ಸ್ವಾಗತ, ನೆಂಟ್ರಾಂಗೆ ಬಂದೊಳರಿ ಒಳಗೆ ಬನ್ನಿ ... ನನ್ನ ಆತಿಥ್ಯನ ಸ್ವೀಕರ್ಸಿ

ರಾವಣ : ಆತಿಥ್ಯ! ...ತಾಯಿ ನಾ ಸ್ವಯಂ ಪಾಕನ ಸ್ವೀಕರ್ಸುರ್ ಸನ್ಯಾಸಿ.

ಸೀತೆ : ಓ ಹಂಗೋ, ಹಂಗಾರೆ ನಾನೇ ತಂದ್ ಕೊಟ್ಟನೆ ನಿಲ್ಲಿ. (ಹಂಗೆ ಹೇಳಿ ಸೀತೆ ಒಂದು ಬಾಳ್ಲೆಲಿ ಹಣ್ಣ್, ಗೆಡ್ಡೆ ಗೆಣ್ಸ್ ಗಳ ತಂದ್ ಹೊಸ್ಲ ಒಳಗೆ ನಿತ್ತ್) ಸ್ವೀಕರ್ಸಿ (ಂತ ಕೊಡಿಕೆ ನೋಡ್ಕನ)

ರಾವಣ : ಅಮ್ಮಾ ಭಿಕ್ಸೆನ ಹೊಸ್ಲಂದ ಈಚೆ ಬಂದ್ ಕೊಡಕಾದ ಕ್ರಮ

ಸೀತೆ : ಸನ್ಯಾಸಿಗಳೇ ನಾ ಹೊಸ್ಲಂದ ಆಚೆ ಬರುವ ಹಾಂಗೆ ಇಲ್ಲೆ, ಹಂಗಾಗಿ ನೀವೇ ಒಳಗೆ ಬಂದ್ ಭಿಕ್ಸೆನ ತಕಣಿ

ರಾವಣ : ಅಮ್ಮಾ ನೀವುಗೆ ಹಂಗೆ ಕಟ್ಟ್ ಉಟ್ಟುತಾರೆ, ನಂಗೆ ಭಿಕ್ಸೆ ಬೇಡ ಬುಡಿ, ವರ್ಣಾಸ್ರಮಗಳ ಧರ್ಮನ ತಿಳ್ದಿರುವ ನೀವುಗೆ ಗೊತ್ತಿಲ್ಲದ್ ಏನುಟ್ಟು, ನೀವುಗೆ ಹೊರೆಗೆ ಬಂದ್ ಭಿಕ್ಸೆ ಕೊಡಿಕೆ ಬೊತ್ತ್ ತಾದರೆ ನಂಗೆ ಭಿಕ್ಸೆನೇ ಬೇಡ ನಾ ಹೊರ್ಟನೆ. (ಹೀಂಗೆ ಹೇಳಿ ಹೊರ್ಡಿಕೆ ನೋಡ್ದೆ)

ಸೀತೆ : ಸನ್ಯಾಸಿ ನಿಲ್ಲೀ... (ತ ಹೇಳಿ ಗೆರೆನ ದಾಟಿಕೆ ಆಗದೆ ಪೇಚಾಡ್ದೆ)

ರಾವಣ : ಧರ್ಮ ಭಿಕ್ಸೆ ಹಾಕಿರೆ ದೇವ್ರ ಕೃಪೆ ಉಟ್ಟು, ...ಮನ್ಸ್ ಗಟ್ಟಿ ಮಾಡಿಕಂಡ್ ಬಂದ್ ಭಿಕ್ಸೆ ಹಾಕಮ್ಮಾ.

ಸೀತೆ : (ತನ್ನಸ್ಟಕೆ) ಆದರೆ... ಆದರೆ... ಈ ರಕ್ಷಾರೇಖೆನ ದಾಟಿ ಲಕ್ಷ್ಮಣನ ಮಾತ್ನ ಮೀರಲಿಯೋ.
...ಭಿಕ್ಸೆ ಬೇಡಿ ಮನೆ ಬಾಗ್ಲಿಗೆ ಬಂದ ಸನ್ಯಾಸಿಗೆ ಭಿಕ್ಸೆ

ಹಾಕದೆ ಹಂಗೆ ಕಳ್ಸುದಾ... ಹಂಗೆ ಕಳ್ಸಿರೆ ನಾ ಧರ್ಮ ಭ್ರಷ್ಟೆ ಆನೆಲೆ ಏನ್ ಮಾಡ್ಲಿ? (ಹೀಂಗೆ ಸೀತೆ ಧರ್ಮ ಸಂಕಟಕ್ಕೆ ಸಿಕ್ಕಿರ್ಕನ)

ರಾವಣ : ಅಮ್ಮಾ ಆ ಈಶ್ವರನ ದಯೆ ಇದ್ದರೆ ಎಲ್ಲಾ ಒಳ್ಳೆದಾದೆ. ಧರ್ಮ... ಧರ್ಮದ ಉಭಯಸಂಕಟ ಮುಂದೆನ ಸುಖಕ್ಕೆ ದಾರಿ. ಆ ಶಿವನ ದಯೆ ಹತ್ತಾರ್ ವೇಸಗಳ ಹತ್ತಾರ್‌ರೀತಿದ್ದ್... ಧರ್ಮದ ಕೆಲ್ಸವೇ ದೇವ್ರ ಕೆಲ್ಸಂತ ನಂಬು.

ಸೀತೆ : ಧರ್ಮಕಾಗಿ ಈ ಲಕ್ಷ್ಮಣನ ರೇಖೆನ ದಾಟಿರೆ...

ರಾವಣ : ಅಮಂಗಳನ ನೆನಿಬೇಡ, ಧರ್ಮನ ಸ್ಥಾಪ್ಸಿಕೆ ಸಾಕ್ಷಾತ್ ತ್ರೀಮೂರ್ತಿಗಳೇ ನಾನಾ ಅವತಾರ ಎತ್ತಿಯೊಳಲ್ಲಾ? ಹಿಂದೆ ಆ ಮಹಾವಿಷ್ಣುವೇ... ವರಾಹ ಆತ್ಲೆನಾ? ಆ ಶಿವ... ವಿಷಕಂಠ... ಕಾಲಕೂಟನೇ ಕುಡ್ದ್ ನೀಲಕಂಠ ಆತ್ಲೆನಾ? ಇದೆಲ್ಲಾ ಯಾಕೆ?

ಸೀತೆ : ಎಲ್ಲಾ ಲೋಕೋದ್ಧಾರಕ್ಕೆ... ಧರ್ಮೋದ್ಧಾರಕ್ಕೆ... ಸತ್ಯನ ಕಾಪಾಡಿಕೆ.

ರಾವಣ : ಹಂಗಾದರೆ ಬೇರೆ ದಾರಿ ಇಲ್ಲೇಂತ ಧರ್ಮ ಸಂಕಟನೇ ಒಪ್ಪಿಕಂಡ್, ಧರ್ಮಕ್ಕೇ ವಿರುದ್ಧ ನಡಿಯೊದು ಸರಿನಾ... ಧರ್ಮಸೂಕ್ಷ್ಮನ ತಿಳ್ದ ನಿಂಗೆ ನಾ ಹೇಳೊಕೂಂತ ಇಲ್ಲೆ. ಧರ್ಮವೇ ಸತ್ಯ... ಸತ್ಯವೇ ಧರ್ಮ... ಸತ್ಯ ಧರ್ಮಗಳಿಗೆ ತೊಡ್ಕ್ ಆಗದಾಂಗೆ ನಡಿಯೊದೇ ಒಳ್ಳ ಹೆಣ್ಣ್‌ನ ಧರ್ಮ...ಹೇಂಗೂ ಆಗಲಿ ನಿಮ್ಮಿಷ್ಟ ನಾ ಹೋಗಿ ಬನ್ನೆ.

(ಸನ್ಯಾಸಿ ರಾವಣ ಹೊರ್ಡಿಕೆ ನೋಡ್ದೆ )

ಸೀತೆ : ಸನ್ಯಾಸಿ ನಿಮ್ಮ ದಮ್ಮಯ್ಯ ನಿಲ್ಲಿ. ಶ್ರೀ ರಾಮನ ನೆನ್ಪುಮಾಡ್ದೇ ನಂಗೆ ಶ್ರೀರಕ್ಷೆ ಆಗಲಿ. (ಹೀಂಗೆ ಹೇಳಿ ಮಟ್ಕರ್ಂಡ್ ತಾಳಿನ

ಬಲ್ದ ಕೈಲಿ ಹಿಡ್ದ್ ಕಣ್ಣಿಗೆ ಒತ್ತಿಕಂಡ್ ಲಕ್ಷ್ಮಣ ರೇಖೆನ ದಾಟಿ) ಶ್ರೀರಾಮ... ಶ್ರೀರಾಮ... ರಾಮ(ಂತ ಹೇಳಿಕಂಡ್ ಸನ್ಯಾಸಿ ರಾವಣಂಗೆ ಭಿಕ್ಸೆ ಹಾಕಿದೆ.) (ಆಗ ಕಪಟ ಸನ್ಯಾಸಿ ರಾನಣ ಸೀತೆನ ರಟ್ಟೆನ ಹಿಡ್ಕಂಡ್ ಗಹ ಗಹಿಸಿ ನೆಗಾಡಿಕಂಡ್.)

ರಾವಣ : ಅಹ... ಹ್ಹ... ಹ್ಹ... ನಡಿ ಜಾನಕಿ, ನನ್ನ ಪುಷ್ಪಕ ಇಮಾನ ನಿಂಗಾಗಿ ತಯಾರಾಗುಟ್ಟು, ಈ ಸನ್ಯಾಸಿ ಯಾರ್ಂತ ತಿಳ್ದ! ಇಪ್ಪತ್ತ್ ಬುಜಗಳ, ಗಂಡೆದೆಯ ಗಂಡ್ ಕಲಿ ದಸಕಂಠ! ವೀರಾಧಿವೀರ ಹತ್ತ್ ಮೋರೆಂವ! ಇಡೀ ಭೂಮಂಡಲನೇ ಗೆದ್ದ ದಶಗ್ರೀವ! ಸವ್ರತ್ರ, ಸರ್ವತಂತ್ರ ಸೊತಂತ್ರನಾದ ಶೂರಾಧಿ ಶೂರ ರಾವಣನೇ ಈ ಸನ್ಯಾಸಿ! ಎಲ್ಲಾ ಬ್ರಹ್ಮಾಂಡಗಳ ತಂಡೋಪತಂಡಗಳ ತುಂಡರ್ಸಿದ, ದಂಡ್ ದಾಳಿಗಳ ಮಂಡಳದ ಮಹಾನಾಯಕನೇ ಈ ಸನ್ಯಾಸಿ ಮಹಾರಾವಣ! (ಹಾಂಗೆ ಹೇಳ್ತಾ ಸೀತೆನ ರಾವಣ ಅಪರ್ಸಿದೆ)

ಸೀತೆ : ಹಾ... ರಾಮ... ಹಾ... ರಾಘವ (ಹೀಂಗೆ ಹೇಳಿಕಂಡ್ ಸೀತೆ ಸೊಯೆತಪ್ಪಿ ಬಿದ್ದದೆ.)

* * * ತೆರೆ * * *

## ದ್ರೌಪತಿ ಪ್ರತಾಪಲಿ

## ಕುಂಬಕರ್ಣ

**ಪಾತ್ರಗ**

1. ಯಜ್ಮಾನ
   – ಊರುನ  ಜಮೀನ್ದಾರ
2. ಮೋನಪ್ಪ
   – ಕೆಲ್ಸದಂವ, ಸಾಲೆಗೆ ಸೆರಿ ಹೋಗದ ಹೆಬಗ.

ಯಜ್ಮಾನ : **ಹಾ ಮಗನೆ ರಣರಂಗ ಧೀರನೇ**

**ಹಾ ಮಗನೆ ಕುರುಕುಲಲಾಮನೆ ।**

**ಹಾ ಮಗನೆ ಮೊಗದೋರೆನುತ .**

**ಹಲುಬಿದನು ಕಲಿ ಪಾರ್ಥ ॥**

ಛೆ, ಛೇ... ಎಂತ ಕತೆ ಮೋನಪ್ಪ, ಅಭಿಮನ್ಯು ಸತ್ತ ಸುದ್ದಿ ಕೇಳಿ ಅರ್ಜುನ ಮರ್ಡುದರ ಕೇಳ್, ಅಯ್ಯೋ ಮಂಜ ಇಡೀ ರಣರಂಗಲೇ ಸೂರರ್ಲಿ ಸೂರಂತ ಹೆಸ್ರ್ ಪಡ್ಸಂವ ನೀ, ಕುರುವಂಸಕ್ಕೇ ಕೀರ್ತಿ ತಂದಂವ ನೀ ಅಯ್ಯೋ ಮಂಜ ಒಮ್ಮೆ ನಂಗೆ ನಿನ್ನ ಮೋರೆನ ತೋಸುರ್ಂತ ಮರ್ಟದೆ, ಯಾರ್... ಅರ್ಜುನ..., ಹೇಂಗೆ... ಮೋನಪ್ಪ?... ಮೋನಪ್ಪಾ... ಏಯ್... ಮೋನಪ್ಪ...

ಮೋನಪ್ಪ : (ನಿದ್ದೆಲಿ ತೂಕಡ್ಸಿಕಂಡಿದದ್ದವ ಹಂಗೆ ಎಚ್ಚರಾಗಿ)

ಓ... ಎಂತ ಹೇಳ್ದರೀ...?

ಯಜ್ಮಾನ : ಅಯ್ಯೋ ಮಲೆ ಮಂಗಾ, ನಾ ನೀ ಕತೆನ ಕೇಳಿಕಂಡ್ ಒಳಾಂತ ನೆನ್ಸಿ ಮಹಾಭಾರತದ ಕತೆನ ಓದಿ ಅದರ ಅರ್ಥ ಹೇಳಿಕಂಡ್ ಒಳೆ, ನೀ ನಿದ್ದೆಲಿ ತೂಕಡ್ಸಿಕಂಡ್ ಒಳ?

ಮೋನಪ್ಪ : ನಾ ನಿನ್ನೆ ಒಂದು ಯಕ್ಷಗಾನ ಆಟ ನೋಡಿಕೆ ಹೋಗಿದ್ದೆ, ಬೊಳ್ಪಾಕನಮುಟ್ಟ ಕಣ್ಣ್ ಮುಚ್ಚಿತ್ಲೆ, ಹಂಗೆ ಈಗ ಕುದ್ದ್ ಕಂಡ್ ಇದ್ದಾಂಗೆ ಕಣ್ಣ್ ತೂಗಿದೆ.

ಯಜ್ಮಾನ : ಮತ್ತೆ ಹೇಂಗೆ ನೀ ಕೆಬಿಕೊಟ್ಟಿಯಾ? ನಾ ಎತ್ತ್‌ಗೆ ಸಾಸ್ತ್ರ ಹೇಳ್ದಾಂಗೆ ನಿಂಗೆ ಎಂತಕೆ ಹೇಳ್ದು? ಆದರೆ ನೀ ಎಸ್ಟ್ ಯಕ್ಷಗಾನ ನೋಡುವ ಹೇಳ್, ದಿನಾ ಹೀಂಗೆ ನಿದ್ದೆ ಕೆಟ್ಟರೆ ನಿನ್ನ ಸೈರ ಯಾಕಾದು ಹೇಳ್?

ಮೋನಪ್ಪ : ನೀವು ಎಂತ ಹೇಳ್ರೆನೋ ಏನೋ... ನಿನ್ನೆನ ಯಕ್ಷಗಾನ ನೋಡದ ಮೊನ್ಸ ಯಾಕೆ? ಅಬ್ಬಬ್ಬೋ ಒಂದು ಕುಂಬಕರ್ಣನ ಏಸ ಇತ್ತ್, ಅಂವ ಏನ್ ಸಬೆನೇ ತಿಂದ್ ಬುಟ್ಟದೋಂತ ಕಾಂಬತಿತ್ತ್.

ಯಜ್ಮಾನ : ಎಂತ ಪಸರ್ಂಗ?

ಮೋನಪ್ಪ : ಪಸರ್ಂಗ... ಇದ್... ದ್ರೌಪತಿ ಪ್ರತಾಪ.

ಯಜ್ಮಾನ : ಎಂತನೇ... ನಿಂಗೆ ತಲೆ ಸಮ ಉಟ್ಟಾ ಇಲ್ಲೆನಾ? ದ್ರೌಪತಿ ಪ್ರತಾಪಲಿ ಕುಂಬಕರ್ಣ ಎಲ್ಲಿಂದ? ದ್ರೌಪತಿ ಪ್ರತಾಪ ಮಹಾಭಾರತದ ಕತೆ, ಕುಂಬಕರ್ಣ ರಾಮಾಯಣ ಕತೆಲಿ... ನೀ ಒಬ್ಬ ಬೋಳು ಬೊಪ್ಪ, ಯಕ್ಸಗಾನಕ್ಕೆ ಹೋಗಿ "ಹೊಟ್ಟು ಕೆಬಿಗೆ ನಾಯಿ ಬೊಗ್ಳ್ದಾಂಗೆ" ಎಂತ ಕರ್ಮಕ್ಕೆ ಮಾತಾಡಿಯ

ಮೋನಪ್ಪ : ಆತಲೆ ನಿಮ್ಮಂತ ದೊಡ್ಡವರ ಎದ್ರ್ ನನ್ನಂತಾ ಪಾಪದಂವ ಮಾತಾಡ್ದು ಪೂರಾ ಸುಳ್ಳೇ ಆತಲೇ? ಅಸ್ಟ್ ನಂಬಿಕೆ ಇಲ್ಲರೆ ನಮ್ಮೊಟ್ಟಿಗೆ ಏಕೆ ಕೇಳೊಕು?

ಯಜ್ಮಾನ : ನಾ ನಿನ್ನ ನಂಬದಾ? ಅಲ್ಲಾ ನೀ ಸುಳ್ಳು ಹೇಳ್ದಾ? ನೀ ನಿನ್ನೆ ನೋಡ್ದ ಆಟ ದ್ರೌಪತಿ ಪ್ರತಾಪಲಿ ಕುಂಬಕರ್ಣ ಇತ್ತಾ?

ಮೋನಪ್ಪ : ಅಯ್ಯೋ ಕರ್ಮನೇ, ನಾ ಏನ್ ಅಂದಾಜಿಗೆ ಹೇಳ್ದಾ? ನೋಡ್ದರ ಹೇಳ್ದೆ ಅಸ್ಟೇ.

ಯಜ್ಮಾನ : ಸಾಕ್ ಮಾತಾಡ್ಬೇಡ, ...ಇದ್ ಕುರ್ಡರ್ ಆನೆ ನೋಡ್ದಾಂಗೆ, ಒಬ್ಬ ಹೇಳ್ತ್ ಗಡ ಆನೇಂತ ಹೇಳ್ರೆ

ದೊಡ್ಡ ಗೋಡೆನ ಹಾಂಗೆ, ಮತ್ತೊಬ್ಬ ಹೇಳ್ತ್ ಗಡ ಆನೇಂತ ಹೇಳ್ರೆ ತಡ್ಪೆನ ಹಾಂಗೆ, ಇನ್ನೊಬ್ಬ ಆನೇಂತ ಹೇಳ್ರೆ ಕಂಬದ ಹಾಂಗೆ, ಮಗ್ದೊಬ್ಬ ತೋರದ ಬೊಳ್ಳಿನ ಹಾಗೆಂತ ಹೇಳ್ದೊಗಡ, ಹಾಂಗೆ ನೀ ಹೇಳ್ದು.

ಮೋನಪ್ಪ : ನೀವು ಹಾಂಗೆ ಹಾರ್ಸಿ ಮಾತಾಡ್ರೆ ನಾ ಕೇಳೊಕಲೆ, ನಾ ನಿನ್ನೆ ನೋಡ್ದಂವ ಏನ್ ಸತ್ತೆನಾ? ನಿನ್ನೆ ಆಟಲಿ ಒಂದು ದೊಡ್ಡಏಸ ಇದ್ದದೇ ಕುಂಬಕರ್ಣಂದ್.

ಯಜ್ಮಾನ : ಥೂ ಮಾತಾಡ್ಬೇಡ, ಸೆರಿ ಸಾಲೆಗೆ ಹೋಗದ ಮಲೆ ಮಂಗ, ಆಟ ನೋಡಿ ಏನಾರ್ ಹೇಳಿ ಕತೆನ ಮರ್ಯಾದಿ ತೆಗಿಬೇಡ, ಹೆಬಗಾ ಅದ್ ಕುಂಬಕರ್ಣ ಅಲ್ಲಾ ಭೀಮ.

ಮೋನಪ್ಪ : ಎಲಾ! ಅದ್ ಭೀಮನಾ ದೂಮನೋಂತ ಇಲ್ಲಿ ಕಂಬುಳಿ ಗುಡುಗು ಹಾಕಿ, ಮಲ್ಕಂಡ್ ಗೂರುತ್ತಿದ್ದ ನೀವುಗೆ ಹೇಂಗೆ ಗೊತ್ತಾಕು? ನಾ ಇದೇ ಕಣ್ಣ್‌ಲಿ ನೋಡ್ದಂವ ಜೀವಲಿ ಒಳೆ.

ಯಜ್ಮಾನ : ಇಂದಾ ಪೊಡಂಬ, ನೀ ಸುಮ್ಮನೆ ನನ್ನೊಟ್ಟಿಗೆ ಚರ್ಚೆ ಮಾಡ್ಬೇಡ, ನಾವುಗೆ ಕತೆ ಓದಿದವುಕೆ ಯಾವ ಯಾವ ಕತೆಲಿ ಇಂತಿಂತ ಜನಗ ಒಳೋಂತ ಹೇಳ್ದು ಗೊತ್ತಿದ್ದದೆ, ಭಾರೀ ದೊಡ್ಡ ವೇಸಲಿ ಟೇಂಕಾರಲಿ ಭೀಮ ಇದ್ದದೆ, ಅದರ್ನೇ ನೀ ಕುಂಬಕರ್ಣಾಂತ ಹೇಳ್ದು.

ಮೋನಪ್ಪ : ಭೀಮನ ನಂಗೆ ಗೊತ್ತುಟು ಯಜ್ಮಾನ್ರೆ, ನಾ ನೋಡದಂವನಾ? ಕಳ್ದ ವರ್ಸ ಮಡಿಕೇರಿನ ಆಟಲಿ ಭೀಮಂಗೆ ಎರ್ಡ್ ಸತ್ತಿ ಕಾಪಿ ಕುಡ್ಸಿಯೊಳೆ ನಾ, ಕಳ್ದ ತಿಂಗ ಸಂಪಾಜೆಲಿ ನಡ್ದಅರೆಬಾಸೆ ಯಕ್ಸಗಾನಲಿ ಅದೇ ಬೀಮಂಗೆ ಗ್ಯಾರ್ದ ಹಣ್ಣ್‌ನ ಸರಾಯ ಸಂಪಾದ್ಸಿ

ಕೊಟ್ಟದೇ ನಾ, ಅದೆಲ್ಲಾ ನೀವುಗೆ ಹೇಂಗೆಗೊತ್ತಾಕು?

ಯಜ್ಮಾನ : ನೀ ಬಾಯಿ ಮುಚ್ಚಿ ಕುದುರ್ನೆ ಒಮ್ಮೆ, ಸುಮ್ಮನೆ ಮಾತಾಡಿ ನಿನ್ನ ಆಯಿಸನ ಕಮ್ಮಿ ಮಾಡ್ಕಂಬೇಡ. ಈಗನ ಕೆಲವು ಮಕ್ಕಳಾಂಗೆ ಮಾತಾಡಿಯ ಅಲ್ಲಾ? ಈಗನ ಇದ್ಯೆಲಿ ಸಾಲೆ ಮಕ್ಕಳಿಗೂ ಪುರಾಣ ಒಂದೂ ಸಮ ಗೊತ್ತಿರ್ದುಲೆ. ನೀ ನನ್ನನೊಟ್ಟಿಗೆ ಚರ್ಚೆ ಮಾಡ್ದರ್‌ಂದ ಆತ್, ಎಲ್ಯಾರ್ ನಾಕ್ ಜೆನ ತಿಳ್ದವರ ಎದ್ರ್ ಹಿಂಗೆ ಮಾತಾಡಿದ್ದರೆ ನಿನ್ನ ಮರ್ಯಾದಿ ಎಲ್ಲಾ ಹೋತಿತ್ತ್. ಇಂದಾ ಅರೆ ಮೊರ್ಲ ದ್ರೌಪತಿ ಪ್ರತಾಪಲಿ ಕುಂಬಕರ್ಣನ ವೇಸ ಯಾಗೊಳೂ ಬಾಕೆ ಸಾದ್ಯನೇ ಇಲ್ಲೆ ಗೊತ್ತಾತಾ?

ಮೋನಪ್ಪ : ಆಂ... ಹೇಳ್ದಾಂಗೆ ಅದ್ ಸಂಗತಿ ಹೀಂಗೆ ಆದ್ದ್, ಭೀಮ ಬಾಕೇಂತ ಹೊರ್ಟಿತ್ತ್ ಗಡ, ಆಗ ಏನೋ ಒಂದು ಹೊಟ್ಟೆಲಿ ವಾಯು ಸುರಾಗಿ ಅವಂಗೆ ಪಚೀತಿ ಗಡ! ಅದಕ್ಕೆ ಭೀಮನ ಬದ್ಲಿಗೆ ಕುಂಬಕರ್ಣ ಬಂದದ್ ಗಡ.

ಯಜ್ಮಾನ : ಹೌದೊಹೌದ್ ಭೀಮ ಗೆಣ್ಸ್ ತಿಂದದ್ ಹೆಚ್ಚಾಗಿ ವಾಯು ಸುರಾದ್ ಆಗಿರೊಕು? ನೀ ನಿನ್ನೆ ಕತ್ತಲೆಗೆ ಹೆಂಡ ಬೊಗ್ಗ್‌ಸಿದ್ ನಿಂಗೆ ಇನ್ನೂ ಬಿರ್ತ್ಲೆ ಕಂಡದೆ. ನೀ ಭೀಮನ ಕುಂಬ ಕರ್ಣಂತೊಳೂ ಹೇಳುವ, ಕುಂಬಕರ್ಣನ ಮಹಿಸಾಸುರಂತನೂ ಹೇಳ್ವ. ಸಾಕ್ ನಿನ್ನ ಮೊರ್ಲುಮಾತ್, ಒಮ್ಮೆ ಬಾಯಿ ಮುಚ್ಚಿಕಂಡ್ ಕುಕ್ಕುರುಬೊಡಿ.

ಮೋನಪ್ಪ : ಆತಲೆ! ನಾವು ಪಾಪದವು ಮಾತಾಡ್ರೆ ಅದಕ್ಕೆ ಬೆಲೆ ಉಟ್ಟಾ? ಅಂವ ಭೀಮ ಆಗಿರ್ಲಿ... ದೂಮ ಆಗಿರ್ಲಿ, ನಂಗೇನ್? ನಾ ಇನ್ನು ಮುಂದೆ ಮಾತೇ ಆಡುದುಲ್ಲೆ.

ಯಜ್ಮಾನ : ಮಾತಾಡಕ್, ಆದರೆ ಮಾತ್ ಮಾತ್ರ ಸೆರಿ ಇರೊಕು. ವಿಸಯನ ಸೆರಿಯಾಗಿ ತಿಳ್ಕಣೊಕು., ವಿಸಯ ತಿಳಿಯೊಕುಂತಾರೆ ಪುರಾಣಗಳ ಓದೊಕು.

ಮೋನಪ್ಪ : ಓ ನೀವು ಆ ಮಾಸ್ಟ್ರಗಳ ಹಾಂಗೆ ಪುರಾಣದ ಲೆಕ್ಚರ್ ಬುಡಿಕೆ ಸುರುಮಾಡ್ದರಿಯಾ?

ಯಜ್ಮಾನ : ಥೂ... ನೀ ಬೊಗ್ಳಾದೆ ಬಾಯಿಮುಚ್ಚಿ ಕುದುರು, ಏನ್‌ಹೇಳ್ದ... ಮಾಸ್ಟ್ರಗಳ ಲೆಕ್ಚರಾ? ಅವರ ಕಾಲ್ ತೊಳ್ದ್ ನೀರ್ ಕುಡಿಯೊಕು ನಿನ್ನ ಹಾಂಗೆ ಇದ್ದೊವು. ಪುರಾಣದ ಬೆಲೆ ಗೊತ್ತಿಲ್ಲದೆ ಇರುವ ನಿನ್ನಂತ ಮಲೆ ಮಂಗ ಹಾಂಗೆ ಹೇಳ್ದು, ನಿಂಗೆ ಸಾವಿರ ಸರ್ತಿಹೇಳ್ದೆ, ನಿನ್ನ ಮಕ್ಕಾರ್ ಹೈಸ್ಕೂಲ್ಲಿ ನಡ್ಸುವ ರಾಮಾಯಣ, ಮಹಾಭಾರತ ಪರೀಕ್ಸೆಗೆ ಕುದುರ್ಸು, ನಿಂಗೆ ಗೊತ್ತಿಲ್ಲರೂ ಮಕ್ಕ ಕಲ್ತ್ ನಿಂಗೂ ಹಂಞ ತಿಳ್ಸುವೊಂತ. ಆದರೆ ನೀ ಕೇಳ್ತ್‌ಲೆ. ನಿನ್ನ ಹಣೆಲಿ ಬರ್ದದೇ ಅಸ್ಟ್! ಯಾರ್ ಏನ್ ಮಾಡ್ದು.

ಮೋನಪ್ಪ : ತೊಪ್ಪಾತ್ ದನಿ, ಇನ್ನು ಮುಂದೆಗಾದರೂ ನನ್ನ ಮಕ್ಕಳ ರಾಮಾಯಣ, ಮಹಾಭಾರತ ಪರೀಕ್ಷಗೆ ಖಂಡಿತಾ ಕುದ್ರಿಸಿನೆ. ಮಕ್ಕ ಓದಿಕನಾರ್ ಕೇಳಿ ನಾ ಪುರಾಣನ ತಿಳ್ಕಣೆ.

*** ತೆರೆ ***

# ದುಷ್ಯಂತ ಶಕುಂತಳೆನ ಕೂಡಿಕೆ

ಪಾತ್ರಗ:–

1. ದುಷ್ಯಂತ
2. ಶಕುಂತಳೆ
3. 1ನೇ ತಾಪಸಿ
4. 2ನೇ ತಾಪಸಿ
5. ಹೈದ
   (ಸರ್ವದಮನ)
6. ಮಾತಲಿ
   (ಇಂದ್ರನ ಸಾರತಿ)
7. ಮಾರೀಚ ಮುನಿ
   (ಮರೀಚಿ ಮಹರ್ಷಿಗಳ ಮಂಜ)
8. ದಾಕ್ಷಾಯಣಿ
   (ಮಾರೀಚ ಮುನಿಗಳ ಹೆಣ್ಣ್)
9. ಶಿಸ್ಯ
   (ಮಾರೀಚ ಮುನಿಗಳ ಶಿಸ್ಯ)

**(ದುಷ್ಯಂತ ರಥಂದ ಇಳ್ದ್ ಮಾರೀಚ ಮುನಿಗಳ ಆಸ್ರಮದ ಹಕ್ಕಲೆ ಬಂದದೆ)**

ದುಷ್ಯಂತ : (ಸಕುನಗಳ ಗ್ರೇಸಿ) ಎಲಾ ನನ್ನ ಬಲ್ದ್ ಹೆಗ್ಲ್ ಸುಮ್ಮನೆ ಅದ್ರ್‌ದೆ ಅಲ್ಲಾ? ಯಾಕೆ ಸುಮ್ಮನೆ ಅದ್ರ್‌ದೆ ನಾ ಯಾವುದರ್ನೂ ಹಾರೈಸಿಕಂಡ್ ಇಲ್ಲೆ, ನನ್ನ ಸುಖ, ಸಂತೋಸ ಎಲ್ಲಾ ಮಾಯಾಗಿ ಬಾರಿ ಸಮೆ ಆತ್, ನಂಗೆ ಈಗ ಒಳ್ದದ್ ದುಃಖ ಮಾತ್ರ. (ತೆರೆನ ಒಳೆಗೆಂದ ತಾಪಸಿಗಳ ಮಾತ್ ಕೇಳ್ದೆ)

ತುಂಟತನ ಮಾಡ್ಬೇಡ! ...ಹಂಗೆ ಸಿಂವದ ಮೊರಿನ ಎಳ್ದಾಡ್ ಬೇಡ! ಏನ್ ಹೇಳ್ರೂ ಇಂವ ಅವಂನ ತುಂಟಾಟ ಬುಡ್ದುಲೆ ಅಲ್ಲಾ?

ದುಷ್ಯಂತ : (ಕೆಬಿ ಕೊಟ್ಟ್ ಕೇಳಿ) ಇದ್ ಅವಿನಯದ ಜಾಗೆ ಅಲ್ಲ, ಆದರೂ ತುಂಟತನ ಮಾಡ್ಬೇಡಾಂತ ಯಾರ್ನ ಜೋರು ಮಾಡ್ತಾ ಒಳೊ. (ಸದ್ದ್ ಕೇಳ್ದ ಕಡೆಗೆ ತಿರ್ಗಿ ನೋಡಿ ಆಸ್ಚರ್ಯಂದ) ಆಹಾ ತಾಪಸಿಗಳ್ಂದ ತುಂಟಾಟ ಮಾಡ್ಬೇಡಾಂತ ಹೇಳ್ಸಿಕಂಡ ಸಣ್ಣ ಹೈದಾದರೂ ತನ್ನ ಪ್ರಾಯಕ್ಕೆ ಮೀರ್ದ ಸಕ್ತಿ ಇರುವ ಈ ಕೂಸು ಯಾರ್? ಅಯ್ಯೆನ ಮೊಲೆನ ಅರ್ದ ತಿಂದ್ಕಂಡ್ ಇದ್ದಾಂಗೆ ಸಿಂಹದ ಮೊರಿನ ಎಳ್ಕಂಡ್ ತನ್ನೊಟ್ಟಿಗೆ ಆಡಿಕೇಂತ ಬಲತ್ಕಾರಂದ ಎಳ್ಕಂಡ್ ಬಂದದೆ ಅಲ್ಲಾ? (ಸಿಂಹದ ಮೊರಿನ ಎಳ್ಕಂಡ್ ತಾಪಸಿಗಳೊಟ್ಟಿಗೆ ಹೈದ ಬಂದದೆ)

ಹೈದ : ಎಲೆ ಸಿಂಹದ ಮೊರಿ, ಬಾಯಿ ಬುಡು, ನಿನ್ನ ಬಾಯಿಲಿ ಎಸ್ಟ್ ಹಲ್ಲ್‌ಗ ಉಟ್ಟೊಂತ ಲೆಕ್ಕ ಮಾಡೊಕು.

1ನೇ ತಾಪಸಿ : ಎಲೆ ತುಂಟಾ, ನಾವ್ಗೆ ಮಕ್ಕಳಾಂಗೆ ಇರುವ ಪ್ರಾಣಿಗಳಿಗೆ ಯಾಕೆ ಬೇನೆ ಮಾಡಿಯ? ಇಂವನ ಏನ್ ಮಾಡ್ದು? ನಿನ್ನ ತುಂಟಾಟ ಹೆಚ್ಚಾತ್, ನಿಂಗೆ ರುಸಿಗ ಸರ್ವದಮನಂತ ಹೆಸ್ರ್ ಇಸಿದ್ ಸೆರಿಯಾಗುಟ್ಟು.

ದುಷ್ಯಂತ : ಇದೇನ್? ಹೊಟ್ಟೆಲಿ ಹುಟ್ಟಿದ ಮಂಜನ ಮೇಲೆ ಪ್ರೀತಿ ಬಂದಾಂಗೆ ಈ ಹೈದನ ಮೇಲೆ ಪ್ರೀತಿ ಬಂದದೆಲಾ? ನಿಜ, ನಂಗೆ ಮಕ್ಕ ಇಲ್ಲದರ್‌ಂದ ಹಿಂಗೆ ಪ್ರೀತಿ ಮೂಡ್ತಾ ಇರ್ದು ಆಗಿರ್ದೊ ಏನೋ?

2ನೇ ತಾಪಸಿ : ಎಲೆ ಸರ್ವದಮನನೆ ಈ ಸಿಂಹದ ಮೊರಿನ ಬುಡದೆ ಇದ್ದರೆ ಅದರ ಅಯ್ಯೆ ಸಿಂಹ ಬಂದ್ ನಿನ್ನ ಮೇಲೆ ಬೀಳ್ದು ಜಾಗ್ರತೆ.

ಹೈದ : (ನೆಗಾಡಿ) ಓಹೋ ಅಯ್ಯಪ್ಪಾ ನಂಗೆ ಹೆದ್ರಿಕೆ ಆದೆ (ಹೀಂಗೆ ಹೇಳಿ ತುಟಿನ ಓರೆ ಮಾಡಿ ಒರ್‌ಂಗ್ಸದೆ)

ದುಷ್ಯಂತ : ಮಹಾ ತೇಜಸ್ನ ಬಿತ್ತ್‌ನ ಹಾಂಗೆ ಇರುವ ಈ ಕೂಸು ಯಾರ್, ಸೌದೆ ಸಿಕ್ಕಿರೆ ಸಾಕ್ ದೊಡ್ಡ ಕಿಚ್ಚಿ ಆವ ಸಣ್ಣ ಕಿಡಿ ನಾಂಗೆ ಕಂಡದೆ.

1ನೇ ತಾಪಸಿ : ಓ ಕೂಸು, ಈ ಸಿಂಹದ ಮೊರಿನ ಬುಡು, ನಿಂಗೆ ಆಡಿಕೆ ಬೇರೆ ಆಟದ ಸಾಮಾನ್ ಕೊಟ್ಟನೆ.

ಹೈದ : ಎಂತದ್ ಯಾವ ಆಟದ ಸಾಮಾನ್ ಕೊಡು. (ಕೈ ನೀಂಡಿದೆ)

ದುಷ್ಯಂತ : (ಕೈ ನೋಡಿ ಆಸ್ಚರ್ಯರ್‌ಂದ) ಇದೇನ್ ಈ ಕೂಸು

ಚಕ್ರವರ್ತಿ ಅವ  ಲಕ್ಷಣದವನಾಂಗೆ ಕಂಡದೆಲಾ?

2ನೇ ತಾಪಸಿ : ಸುವ್ರತೆ, ಇಂವ ಬೆರಿ ಮಾತಿಗೆ ಬೊಗ್ಗಂವ ಅಲ್ಲಾ, ನೀ ಹೋಗಿ ನನ್ನ ಕುಟೀರಂದ ರುಸಿಕುಮಾರ ಮಾರ್ಕಾಂಡೇಯ ಆಡುವ ಬಣ್ಣದ ಮೊಣ್ಣುನ ನವಿಲು ಉಟ್ಟು, ಅದರ ತಕಂಡ್ ಬಾ

1ನೇ ತಾಪಸಿ : ಹಂಗೆ ಆಗಲಿ, ಹೋಗಿ ತನ್ನೆ (ಹೋದೆ)

ಹೈದ : ನಿಮ್ಮ ಆಟದ ಸಾಮಾನ್ ಬಾಕನ ಮುಟ್ಟ ನಾ ಇದರೊಟ್ಟಿಗೇ ಆಡ್ನೆ (ಹೀಂಗೆ ಹೇಳಿ  ತಾಪಸಿನ ನೋಡಿ ನೆಗಾಡ್ದೆ)

ದುಷ್ಯಂತ : ತುಂಟತನ ಇರುವ ಈ ಕೂಸುನ ನೋಡ್ರೆ ನಂಗೆ ಆಸೆ ಆದೆ. ಇಂತಾ ಮುದ್ದು ಮಕ್ಕಳ ತೆತ್ತಿಕಂಡ್ ಮುದ್ದು ಮಾಡೊವೇ ಪುಣ್ಯವಂತರ್.

2ನೇ ತಾಪಸಿ : ಏನ್ ಮಾಡ್ದು? ಇಂವಂಗೆ ನನ್ನ ಮಾತ್ ಲೆಕ್ಕಕ್ಕೇ ಇಲ್ಲೆ. (ಆಚೆ ಈಚೆ ನೋಡಿ) ರುಸಿಕುಮಾರರ್ ಇಲ್ಲಿ ಯಾರೂ ಇಲ್ಲೆನೋ?(ರಾಜನ ನೋಡಿ) ಎಲೆ ಮಹಾನುಭಾವ ಇಲ್ಲಿ ಬನ್ನಿ, ಸಿಂಹದ ಮೊರಿನ ಕಪಿಮುಸ್ಟಿಲಿ ಹಿಡ್ಕಂಡ್ ಪೀಡ್ಸುವ ಇಂವನ ಕೈಯಿಂದ ಸಿಂಹದ ಮೊರಿನ ಒಮ್ಮೆ ಬುಡ್ಸಿ.

ದುಷ್ಯಂತ : (ನೆಗಾಡಿಕಂಡ್ ಹಕ್ಕಲೆ ಬಂದ್) ಕಂದಾ, ಮಹಾರುಸಿಗಳ ಕೂಸು, ಆಸ್ರಮಕ್ಕೆ ಈ ನಿನ್ನ ತುಂಟಾಟ ಸೆರಿ ಇಲ್ಲೆ. ಪ್ರಾಣಿಗಳಿಗೆ ನೆಮ್ಮದಿನ ಜಾಗೆ ಆಗಿರುವ ಈ ಪ್ರಶಾಂತ ವಾತಾವರಣನೇ ನೀ ಕೆಡ್ಸಿಯ ಅಲ್ಲಾ? ಇಲ್ಲಿ ನೀ ಶ್ರೀಗಂಧದ ಮರಲಿ ಇರುವ ಸರ್ಪದ ಮೊರಿನ ಹಾಂಗೆ ಕಂಡಿಯಾ?

2ನೇ ತಾಪಸಿ : ಎಲೆ ಮಹಾನುಭಾವ, ಇಂವ ರುಸಿಕುಮಾರ ಅಲ್ಲಲ್ಲಾ.

ದುಷ್ಯಂತ : ಆಕಾರಕ್ಕೆ ತಕ್ಕ ನಡ್ತೆನೇ ಹೇಳ್ದೆ. ಆಸ್ರಮದ ನಂಬಿಕೆಂದ ನಾ ಹೀಂಗೆ ಗೇನ ಮಾಡ್ದೆ (ತನ್ನ ಇಚ್ಚೆನಾಂಗೆ ಕೂಸುನ ತೊಬ್ಬಿಕಂಡ್, ಕುಸಿ ಕುಸಿಲಿ ತನ್ನಸ್ಟಕ್ಕೆ) ಯಾರ ಕೂಸೋ ಏನೋ? ಆದರೆ ಈ ಕೂಸುನ ಮುಟ್ಟಿರೂ ಸಾಕ್ ನಂಗೇನೋ ಸುಖ ಕಂಡದೆ, ಅಂವನ ಹೆತ್ತವುಕೆ ಎಸ್ಟ್ ಕುಸಿ, ಸಂತೋಸ ಆಕಿಲೆ?

2ನೇ ತಾಪಸಿ : (ಇಬ್ಬನ್ರೂ ನೋಡಿ) ಆಸ್ಚರ್ಯ! ಆಸ್ಚರ್ಯ!!

ದುಷ್ಯಂತ : ಆಸ್ಚರ್ಯ ಎಂತದ್?

2ನೇ ತಾಪಸಿ : ಈ ಹೈದನ ರೂಪ ಸುಮಾರ್ ನಿಮ್ಮ ಹಾಂಗೆ ಕಂಡದೆಲ್ಲಾ? ನೀವು ಹೊಸ್ಬ ಆದರೂ ನಿಮ್ಮೊಟ್ಟಿಗೆ ಈ ಹೈದ ಕುಸಿಂದಲೇ ಉಟ್ಟಲ್ಲಾಂತ ಆಸ್ಚರ್ಯ ಆತ್.

ದುಷ್ಯಂತ : (ಕೂಸುನ ಮುದ್ದು ಮಾಡಿ) ಓ ತಾಪಸಿಯರೇ, ಇಂವ ಮುನಿಕುಮಾರಲ್ಲದೆ ಯಾವ ಕುಲಲಿ ಹುಟ್ಟಿದಂವ?

2ನೇ ತಾಪಸಿ : ಇಂವ ಕುರು ಕುಲಲಿ ಹುಟ್ಟಿದಂವ.

ದುಷ್ಯಂತ : (ತನ್ನಸ್ಟಕೇ) ಈ ಕೂಸು ನಮ್ಮ ಕುಲದಂವನಾ? ಓ ಹಂಗೆ ಈ ತಾಪಸಿ ಇಂವ ನನ್ನ ಹಾಂಗೆ ಕಂಡದೇಂತ ಹೇಳ್ದಾಗಿರೊಕು. ಪುರುವಂಸದೊವುಕೆ ವನವಾಸ ಪ್ರಾಯ ಆಕನ ಇರುವಂತದ್. ಯೌವನಲಿ ನಮ್ಮವು ರಾಜ್ಯಾಳಿಕಂಡ್ ಅರಮನೆಲಿರೊವು, ಪ್ರಾಯ ಆಕನ ಮಾತ್ರ ಸನ್ಯಾಸನ ಸ್ವೀಕರ್ಸಿ, ಕಾಡಿಗೆ ಹೋದು.(ಪ್ರಕಾಸ) ಈ ದೇವ ಭೂಮಿ ಮೊನ್ಸರಿಗೆ ಗೋಚರ ಆವಂತದ್ ಅಲ್ಲ ತಾನೆ?

2ನೇ ತಾಪಸಿ : ಎಲೆ ಮಹಾನುಭಾವ, ನೀವು ಹೇಳ್ದ್ ಸೆರಿ, ಆದರೆ ಇಂವನ ಅವ್ವ ಅಪ್ಸರೆನ ಮಗಳಾದ ಕಾರಣ ದೇವ ಗುರುಗಾದ ಮಾರೀಚ ಮುನಿಗಳ ಈ ತಪೋವನಲಿ

ಇಂವನ ಹೆತ್ತತ್.

ದುಷ್ಯಂತ : (ತನ್ನಸ್ಟಕೆ) ಆಹಾ! ಆಸೆನ ಹುಟ್ಟಿಸಿಕೆ ಇದ್ ಎರ್ಡ್ನೇ ಕಾರಣ. (ಪ್ರಕಾಸ) ಆ ಅಪ್ಸರೆನ ಮಗಳಿಗೆ ಗಂಡ ಆಗಿರುವ ರಾಜ ರುಸಿನ ಹೆಸ್ರ್ ಎಂತದ್?

2ನೇ ತಾಪಸಿ : ಕಟ್ಟಿಕಂಡ ಹೆಣ್ಣ್ ನೇ ಬುಟ್ಟಂವನ ಹೆಸ್ರ್ ಹೇಳಿಕೆ ಯಾರಿಗೆ ಮನ್ಸಾದು?

ದುಷ್ಯಂತ : (ತನ್ನಸ್ಟಕೆ) ಇದೇನ್ ಈ ಕತೆ ನನ್ನನೇ ಗುರಿ ಮಾಡುವಾಂಗೆ ಕಂಡದೆಲಾ? ನೋಡ್ನೊ ಈ ಕೂಸುನ ಅವ್ವನ ಹೆಸ್ರ್ ಹೇಂಗೇಂತ ಕೇಳ್ನೆ... ಬೇಡ... ಬೇಡ ಬೇರೆಯವರ ಹೆಣ್ಣ್‌ನ ಸುದ್ದಿ ನಂಗ್ಯಾಕೆ ಬೇಡ...

## ದೃಸ್ಯ – 2

**(ಮೊಣ್ಣುನ ನವಿಲುನ ಹಿಡ್ಕಂಡ್ ತಾಪಸಿ ಬಂದದೆ )**

1ನೇ ತಾಪಸಿ : ಏ ಸರ್ವದಮನ, ಶಕುಂತದ ಪೊರ್ಲುನ ನೋಡು.

ಹೈದ : (ಆಚೀಚೆ ನೋಡಿ) ಎಲ್ಲಿ ನನ್ನ ಅವ್ವ?

ಇಬ್ಬೊರು ತಾಪಸಿಗ : (ನೆಗಾಡುವೆ)

1ನೇ ತಾಪಸಿ : ಅವ್ವನ ಮೇಲೆನ ಪ್ರೀತಿಂದ ಶಕುಂತಂತ ಹೇಳ್ದಕ್ಕೆ ಅವ್ವ ಬಾತ್‌ಂತ ಗ್ರೇಸಿತ್.

2ನೇ ತಾಪಸಿ : ಓ ಕಂದಾ, ಈ ಮೊಣ್ಣುನ ನವಿಲುನ ಪೊರ್ಲುನ ನೋಡೂಂತ ಹೇಳ್ದಸ್ಟೇ.

ದುಷ್ಯಂತ : (ತನ್ನಸ್ಟಕೆ) ಈ ಕೂಸುನ ಅವ್ವನ ಹೆಸ್ರ್ ಶಕುಂತಳೆಂತಳೋ, ಲೋಕಲಿ ಒಂದೇ ಹೆಸ್ರ್ ನವು

ಎಸ್ಟೋ ಜೆನ ಇದ್ದವೆ ಅಲ್ಲಾ? ಆದರೂ ಈ ಹೆಸ್ರ್ ಮಾತ್ರ ಬಿಸ್ಲ್ ಕುದುರೆನಾಂಗೆ ಬೇಜಾರ್ ಮಾಡ್ದೆ.

ಹೈದ : ಅಮ್ಮಾ... ಈ ಬಣ್ಣದ ನವಿಲು ನಂಗೆ ಬೇಕು. (ಹೀಂಗೆ ಹೇಳಿ ಆಟದ ನವಿಲುನ ತಕ್ಕಣಿಕೆ ಕೈ ನೀಂಡ್ದೆ)

1ನೇ ತಾಪಸಿ : (ಹೆದ್ರಿ) ಓ... ರಕ್ಷಾ ಯಂತ್ರ ಇಂವನ ಕೈಲಿ ಕಾಂಬೊದುಲ್ಲೆ ಅಲ್ಲಾ?

ದುಷ್ಯಂತ : ಹೆದ್ರ್ ಬೇಡಿ ಸಿಂಹದ ಮೊರಿನೊಟ್ಟಿಗೆ ಆಡ್ಕನ ಇಂದೆನಿ ಇಲ್ಲಿ ಜಾರಿ ಬಿದ್ದುಟು. (ಹೀಂಗೆ ಹೇಳಿ ಹೆರ್ಕಿಕಂಡದೆ)

ಇಬ್ಬೊರು ತಾಪಸಿಗ : ಬೇಡ... ಬೇಡ! ಇನ್ನೆಂತ ಮಾಡ್ದು ಹೆರ್ಕಿ ಕಂಡೊ ಅಲ್ಲಾ. (ಹೀಂಗೆ ಹೇಳಿ ಆಸ್ಚರ್ಯಂದ ಕಣ್ಣ್ ಬಾಯಿ ಬುಟ್ಕಂಡ್ ಒಬ್ಬರ್‌ಂದೊಬ್ಬ ನೋಡುವೆ)

ದುಷ್ಯಂತ : ಯಾಕೆ ಮುಟ್ಟುದು ಬೇಡಾಂತ ಹೇಳ್ದರಿ?

1ನೇ ತಾಪಸಿ : ಓ ಮಹಾನುಭಾವ ಕೇಳಿ, ಇದ್ ಅಪರಾಜಿತೆಂತ ಹೇಳುವ ಮೂಲಿಕೆ, ಇದರ ಇಂವಂಗೆ ಜಾತಕರ್ಮ ಸಮೆಲಿ ಮಾರೀಚ ಮುನಿಗ ಕಟ್ಟಿದೊ, ನೆಲಕ್ಕೆ ಬಿದ್ದರೆ ಇದರ ಇಂವನ ಅವ್ವ ಅಪ್ಪ, ಕಟ್ಟಿದೊವು ಬುಟ್ಟರೆ ಬೇರೆ ಯಾರೂ ಮುಟ್ಟಿಕೆ ಆಗದ್.

ದುಷ್ಯಂತ : ಒಂದು ವೇಳೆ ಮುಟ್ಟಿರೆ?

1ನೇ ತಾಪಸಿ : ಮುಟ್ಟಿದ ಕೂಡ್ಲೇ ಸರ್ಪ ಆಗಿ ಕಚ್ಚಿದೆ.

ದುಷ್ಯಂತ : ನೀವು ಹೇಳುವ ಹಾಂಗೆ ಹಿಂದೆ ಯಾಗಾರ್ ನಡ್ದುಟಾ?

ಇಬ್ಬೊರು ತಾಪಸಿಗ : ಎಸ್ಟೋ ಸತ್ತಿ.

ದುಷ್ಯಂತ : (ಸಂತೋಸಂದ) ಈಗ ನನ್ನ ಆಸೆ ಈಡೇರ್ದರ ಹೇಂಗೆ ತಾನೆ ಕೊಂಡಾಡದಿರ್ಲಿ (ಹೀಂಗೆ ಹೇಳಿ

ಕೂಸುನ ಕುಸಿ ಕುಸಿಲಿ ತೆತ್ತಿಕಂಡ್ ಮುದ್ದಾಡ್ದೆ)

2ನೇ ತಾಪಸಿ : ಏ ಸುವ್ರತೆ, ಪೋಯಿ ಆಸ್ರಮಕ್ಕೆ, ವೃತಲಿರುವ ಶಕುಂತಳೆಗೆ ಈ ಕುಸಿನ ಸುದ್ದಿನ ಹೇಳೊನೊ (ಇಬ್ಬೊರು ಹೊರ್ಟವೆ)

ಹೈದ : ನನ್ನ ಬುಡು, ನಾ ಅವ್ವನ ಹಕ್ಕಲೆ ಹೋನೆ.

ದುಷ್ಯಂತ : ಓ ಕೂಸು, ನನ್ನೊಟ್ಟಿಗೆ ನಿನ್ನ ಅವ್ವನ ಕುಸಿ ಪಡ್ಸುವೆ ಇರ್.

ಹೈದ : ನನ್ನ ಅಪ್ಪ ದುಷ್ಯಂತ... ನೀ ಯಾರ್?

ದುಷ್ಯಂತ : (ನೆಗಾಡಿಕಂಡ್) ಈ ವಿವಾದವೇ ನಂಗೆ ಇನ್ನೂ ವಿಸ್ವಾಸ ಮೂಡುವಾಂಗೆ ಮಾಡ್ದೆ (ಅಸ್ಟರ್ಲಿ ತಲೆ ಸೆರಿ ಬಾಚದ, ನಾರ್ ಸೀರೆ ಉಟ್ಟ್ ಕಂಡ ಶಕುಂತಳೆ ಬಂದದೆ)

ಶಕುಂತಳೆ : ಸರ್ವದಮನನ ಕೈಲಿದ್ದ ಮೂಲಿಕೆ ಸರ್ಪವಾಗದೆ ಇದ್ದ ಸುದ್ದಿ ಕೇಳ್ದ ಮೇಲೆನೂ ನನ್ನ ಭಾಗ್ಯಲಿ ನಂಗೇನೂ ಪೂರ ನಂಬಿಕೆ ಬಾತ್ಲೆ.

ದುಷ್ಯಂತ : (ಶಕುಂತಳೆನ ನೋಡಿ) ಆಹಾ... ಪೂಜ್ಯಳಾದ ಶಕುಂತಳೆ? ಮಾಸಿದ ನಾರ್ ಸೀರೆನ ಉಟ್ಟುಟು, ಮಾಡುವ ವೃಥಂದ ಮೋರೆ ಬಾಡಿಟು, ಈ ಪುಣ್ಯಾತ್ ಗಿತ್ತಿ ನನ್ನ ನಿಷ್ಕರುಣೆನ ವಿರಹಂದ ಬಾಡಿ ಬೆಂಡಾಗುಟ್ಟು.

ಶಕುಂತಳೆ : (ಪಶ್ಚಾತ್ತಾಪಂದ ಕಳೆಗುಂದಿದ ರಾಜನ ನೋಡಿ) ಆರ್ಯಪುತ್ರನ ಹಾಂಗೆ ಕಾಂಬೊದುಲ್ಲೆ ಅಲ್ಲಾ? ಇವು ಯಾರ್, ರಕ್ಷಣೆಗಾಗಿ ಕಟ್ಟಿದ ರಕ್ಷಾಯಂತ್ರನ ಮುಟ್ಟಿ ಅಸುದ್ದ ಮಾಡ್ದೊವು.

ಹೈದ : (ಅವ್ವನ ಹಕ್ಕಲೆ ಹೋಗಿ) ಅವ್ವಾ, ಇವು ಯಾರ್ ಹೊಸ್ಬರ್, ನನ್ನ ಕೂಸು, ಮಂಜಂತ ಮುದ್ದು ಮಾಡೊವು.

ದುಷ್ಯಂತ : ಓ ಪ್ರಿಯೆ, ನಿನ್ನ ವಿಯೋಗಂದ ಬೊಚ್ಚಿ ಹೋದ ನನ್ನ ನೋಡಿ ಆರ್ಯಪುತ್ರನ ಹಾಂಗಿಲ್ಲೆಂತ ಹೇಳ್ದು ಸೆರಿಯೇ, ನಾ ನಿನ್ನ ನಡ್ಸಿಕಂಡ ಕ್ರೂರತನಕ್ಕೆ ಸಿಕ್ಕಿದ ಸಿಕ್ಷೆ.

ಶಕುಂತಳೆ : (ತನ್ನಸ್ಟಕೆ) ಎಲೆ ಮನ್ಸೇ, ಸಮಾದಾನ ಮಾಡಿಕ ಸಮದಾನ. ಮಚ್ಚರನ ಬುಟ್ಟ ಮಹರಾಜನ ಕರುಣೆಗೆ ಪಾತ್ರಳಾವೆ, ಇವೇ ಆರ್ಯಪುತ್ರ!

ದುಷ್ಯಂತ : ಪ್ರಿಯೆ, ಗ್ರಾಣ ಬುಟ್ಟ ಮೇಲೆ ರೋಹಿಣಿ ಚಂದ್ರನ ಹಕ್ಕಲೆ ಹೋಗುವಾಂಗೆ, ಸೊಯೆ ಬಂದ್ ಮರ್ವು, ಮಬ್ಬುಮಾಯಾದ ನನ್ನ ಎದರ್ ಕುಸಿಂದ ಇರುವಾಂಗೆನೀ ಕಂಡಿಯ.

ಶಕುಂತಳೆ : ಆರ್ಯಪುತ್ರನೆ ಜಯ್... (ಹೀಂಗೆ ಪೂರ ಹೇಳಿಕಾಗದೆ ದುಃಖಂದ ಸುಮ್ಮನಾದೆ)

ದುಷ್ಯಂತ : ಸುಂದರಿ, ದುಃಖ ತಡಿಯಕೆ ಆಗದೆ ನೀ ಜಯಶೀಲನಾಗ್ಂತ ಹೇಳದಿದ್ದರೂ ಬಣ್ಣ ಬಳಿಯದ ನಿನ್ನ ಮೋರೆನ ನೋಡಿಯೇ ನಾ ಜಯಶೀಲನಾದೆ.

ಹೈದ : ಅವ್ವಾ... ಇವು ಯಾರ್?

ಶಕುಂತಳೆ : ಓ ಕೂಸು ನಿನ್ನ ಭಾಗ್ಯನ ಕೇಳ್.

ದುಷ್ಯಂತ : ನನ್ನ ತಿರಸ್ಕಾರಂದಾಗಿರುವ ದುಃಖನ ಮರ್ತ್ ಬುಡು, ಅದೇಕೆಂತ ಗೊತ್ತ್ಲೆ ಆಗ ನನ್ನ ಮೊನ್ಸ್‌ನ ಮೇಲೆ ಮರ್ವುಂತೇಳುವ ಕತ್ತಲೆ ಕವುದಿತ್ತ್. ಮಂಕ್ ಕವುದವರ ನಡವಳಿಕೆ ಏನೋ ಹೇಂಗೋ ಕುತ್ತಿಗೆಗೆ ಹಾಕಿದ ಹೂನ ಮಾಲೆನನೂ ಹಾವೂಂತ ಹೆದ್ರಿ ತೆಗ್ದ್ ಇಡುವ ಹಾಂಗೆ, ಕಣ್ಣಿದ್ದೂ ಕುರುಡ ನಾಂಗೆ. (ಹೀಂಗೆ ಹೇಳಿ ಶಕುಂತಳೆಗೆ ತಲೆ ಬೊಗ್ಗ್‌ಸಿ

ಪ್ರಣಾಮ ಮಾಡ್ದೆ)

ಶಕುಂತಳೆ : ಆರ್ಯಪುತ್ರ, ನಂಗೆ ತಲೆ ಬಾಗ್ ಬೇಡ, ನಿಜವಾಗಿ ನನ್ನ ಪುಣ್ಯಕ್ಕೆ ವಿರೋಧದ ಏನೋ ಕರ್ಮ ನಡ್ದ್ ಹೋತು, ಹಾಂಗಾಗಿ ದಯಾಳು ಆದ ನೀನೂ ನನ್ನೊಟ್ಟಿಗೆ ಹಾಂಗೆ ನಡ್ಕಂಡ, ಆರ್ಯಪುತ್ರ ತಿರಸ್ಕರಿಸಿದ ನಾ ಹೇಂಗೆ ನಿಂಗೆ ನೆನ್ಪಾದೆ?

ದುಷ್ಯಂತ : ನಾ ಹಿಂದೆ ಮರ್ವುಂದ ನಿನ್ನ ತಿರಸ್ಕಾರ ಮಾಡ್ಕನ ನಿನ್ನ ಕಣ್ಣ್‌ಂದ ಉಕ್ಕಿ ಹರ್ದ ಕಣ್ಣೀರ್ನ ತಿರಸ್ಕಾರಂದ ಒರ್ಸದೆ ಹೋದೆ, ಹಾಂಗೆ ಈಗ ನಿನ್ನ ಕಣ್ಣ್ ರೆಪ್ಪೆಲಿ ಕಾಂಬ ಕಣ್ಣೀರ್ನ ಒರ್ಸಿ ಮನ್ಸಿಗೆ ನೆಮ್ಮದಿ ತಂದ್ರ್ಕಣೆ. (ಶಕುಂತಳೆನ ಕಣ್ಣೀರ್ ಒರ್ಸಿದೆ)

ಶಕುಂತಳೆ : (ರಾಜನ ಹೆಸ್ರ್ನ ಉಂಗಿಲನ ನೋಡಿ) ಆರ್ಯಪುತ್ರ ಇದ್ ಆ ಉಂಗಿಲ ತಾನೆ?

ದುಷ್ಯಂತ : ಹೌದು.

ಶಕುಂತಳೆ : ಆರ್ಯಪುತ್ರ ನಂಬುಸೊಕಾದ ಕಾಲಲಿ ನಂಗೆ ಇದ್ ಸಿಕ್ಕದೆ ಏನೋ ಕಸ್ಟಗ ಬಾತ್.

ದುಷ್ಯಂತ : ಹಂಗಾದರೆ ವಸಂತಕಾಲಲಿ ಬಳ್ಳಿಲಿ ಹೂ ಅರ್ಳುವ ಹಾಂಗೆ ನೀ ಈ ಉಂಗಿಲನ ಹಾಕ.

ಶಕುಂತಳೆ : ಇದರ್ಲಿ ನಂಗೆ ನಂಬಿಕೆ ಇಲ್ಲೆ, ಆರ್ಯಪುತ್ರನೇ ಇದರ ಹಾಕಣೊಕು. (ಮಾತಲಿ ಆಗ ಬಂದದೆ)

ಮಾತಲಿ : ಓ ಮಹಾನುಭಾವ, ದೈವ ಯೋಗಂದ ಧರ್ಮಪತ್ನಿ ಕೂಡ್ದರ್‌ಂದನೂ, ಮಂಜನ ಮೋರೆನ ನೋಡ್ದ ಕುಸೀಂದ ಇರುವ ನಿನ್ನ ಸಂತೋಸ ಇನ್ನೂ ಹೆಚ್ಚಾಗಲಿ.

ದುಷ್ಯಂತ : ಒಳ್ಳೆ ಜೋಸ್ತಿಯಾದ ನಿನ್ನ ಹಾರೈಕೆಂದ ನನ್ನ ಆಸೆ ಆಕಾಂಕ್ಷೆಗ ಈಡೇರ್ತ್, ಮಾತಲಿ ಈ

ನನ್ನಸಂತೋಸನ ಇಂದ್ರಂಗೆ ತಿಳ್ಸೊಕು ಅಲ್ಲಾ?

ಮಾತಲಿ : (ನೆಗಾಡಿಕಂಡ್) ದೇವತೆಗಳಿಗೆ ತಿಳಿಯದ್ದ್ ಯಾವುದು ಉಟ್ಟು? ಮಹರಾಜ ನಾವೀಗ ಪೂಜ್ಯರಾದ ಮಾರೀಚ ಮುನಿಗಳ ಕಾಣೊಕು, ಅಲ್ಲಿಗೆ ಪೋಯಿ.

ದುಷ್ಯಂತ : ಶಕುಂತಳೆ ನೀ ಕೂಸುನ ತೆತ್ತಿಕ, ನಿನ್ನೊಟ್ಟಿಗೆ ಬಂದ್ ಪೂಜ್ಯರಾದ ಮಾರೀಚ ಮುನಿಗಳ ನೋಡ್ನೆ.

ಶಕುಂತಳೆ : ಆರ್ಯಪುತ್ರನೊಟ್ಟಿಗೆ ಗುರುಗಳ ಸನ್ನಿಧಿಗೆ ಬಾಕೆ ನಾಚಿಕೆಯಾದೆ.

ದುಷ್ಯಂತ : ಸಾಕ್, ನಾಚಿಕೆ ಯಾಕೆ? ಒಳ್ಳ ಸಮೆಲಿ ಗುರುಗಳ ಆಸೀರ್ವಾದ ಮುಂದೆ ಪಡಿಯೊಕು ಬಾ ಬಾ ಪೋಯಿ (ಎಲ್ಲವೂ ಹೋದವೆ)

## ದೃಸ್ಯ–3

(ಮಾರೀಚ ಮುನಿಗಳ ಆಸ್ರಮ)

ಮಾರೀಚ : ದಾಕ್ಷಾಯಣಿ, ಇಂವನೇ ಮಹರಾಜ ದುಷ್ಯಂತ. ನಿನ್ನ ಮಂಜ ಇಂದ್ರನ ಯುದ್ಧಗಳ್ಲಿ ಇವನೇ ಸೂರನಾಂಗೆ ಹೋರಾಡ್ದಂವ, ಇವನ ಕೈನ ಬಿಲ್ಲ್ ಬಾಣಗಳ್‌ಂದ ದೇವೇಂದ್ರನ ಕೈನ ವಜ್ರಾಯುಧ ಅಲಂಕಾರಕ್ಕೆ ಮಾತ್ರ ಇತ್ತ್.

ದಾಕ್ಷಾಯಣಿ : ಇಂವ ಮಹಾನುಭಾವಂತ ನೋಡ್ಕನೇ ಗೊತ್ತಾದೆ.

ಮಾತಲಿ : ಮಹಾರಾಜ, ದೇವತೆಗಳಿಗೇ ತಾಯಿ ತಂದೆಗಳಾಂಗೆ ಇರುವ ಇವು ಪುತ್ರ ವಾತ್ಸಲ್ಯಂದ ನಿನ್ನ ನೋಡ್ತಾ ಒಳೊ. ಹಂಗಾಗಿ ಅವರ ಹಕ್ಕಲೆ ಹೋಗಿ ಆಸೀರ್ವಾದ ತಕ.

ದುಷ್ಯಂತ : (ಮುನಿಗಳ ಹಕ್ಕಲೆ ಹೋಗಿ) ಇಂದ್ರನ ಆಳಾದ ದುಷ್ಯಂತ ಇಬ್ರೊಬ್ರಿಗೂ ಸಾಷ್ಟಾಂಗ ಪ್ರಣಾಮ ಮಾಡ್ದೆ. (ಇಬ್ರೊಬ್ರಿಗೂ ಪ್ರಣಾಮ ಮಾಡ್ದೆ)

ಮಾರೀಚ : ಎಲೈ ವತ್ಸಾ, ತುಂಬಾ ಸಮೆ ರಾಜ್ಯಭಾರ ಮಾಡ್.

ದಾಕ್ಷಾಯಣಿ : ಎಲೈ ವತ್ಸನೇ, ಸೂರರ್ಲಿ ಸೂರನಾಗ್.

ಶಕುಂತಳೆ : ಮಂಜನೊಟ್ಟಿಗೆ ನಾನೂ ನಿಮ್ಮ ಪಾದಕ್ಕೆ ಸಾಷ್ಟಾಂಗ ಪ್ರಣಾಮ ಮಾಡ್ನೆ.

ಮಾರೀಚ : ಎಲೈ ಮಗಳೇ, ನಿಂಗೆ ಇಂದ್ರಂಗೆ ಸಮನಾದ ಗಂಡ, ಜಯಂತನಂತ ಮಂಜ ಇರ್ಕನ ನಾ ಇನ್ನೇನ್ ಆಸೀರ್ವಾದ ಮಾಡಲಿ. ಶಚಿದೇವಿನಾಂಗೆ ಬಾಳ್.

ದಾಕ್ಷಾಯಣಿ : ಎಲೆ ಮಗಳೇ, ಪತಿಗೆ ತಕ್ಕ ಸತಿಯಾಗಿ ಬಾಳ್, ದೀರ್ಘ ಆಯಿಸ ಇರ್ವ ನಿನ್ನ ಮಂಜ ಎರಡ್ ಕುಲಗಳ ಉದ್ಧಾರಮಾಡಲಿ. ಎಲ್ಲವೂ ಕುದ್ದ್ ಕಣಿ (ಎಲ್ಲವೂ ಕುದ್ದವೆ)

ಮಾರೀಚ : (ಒಬ್ಬೊಬ್ಬರ ತೋರ್ಸಿ) ಸಾಧ್ವಿಯಾದ ಶಕುಂತಳೆ, ಈ ಕುಲೋದ್ಧಾರಕ ಮತ್ತೆ ನೀ ಎಲ್ಲವೂ ಶ್ರದ್ಧೆ, ವಿತ್ತ, ವಿಧಿನ ಹಾಂಗೆ ಒಂದೇ ಕಡೆ ಸೇರಿಯೊಳರಿ.

ದುಷ್ಯಂತ : ಪೂಜ್ಯರೇ, ತಮ್ಮ ದರ್ಶನಕ್ಕೆ ಮುಂದೆನೇ ನನ್ನ ಇಷ್ಟಾರ್ಥ ಕೈಗೂಡ್ತ್, ಹಂಗಾಗಿ ನಿಮ್ಮ ಅನುಗ್ರಹ ವಿಸೇಸವಾದ್ದ್, ಹೂ ಆದ ಮೇಲೆ ಹಣ್ಣ್, ಮೋಡ ಕಟ್ಟಿದ ಮೇಲೆ ಮಳೆ, ಕಾರಣ ಕಾರ್ಯಗಳ ಸಂಬಂಧದ ಕ್ರಮ ಹೀಂಗೆ. ಆದರೆ ತಮ್ಮ ಸನ್ನಿಧಿಲಿ ಇದಲ್ಲ ಕ್ರಮ ತಮ್ಮ ಪ್ರಸಾದಕ್ಕೆ ಮುಂದೆನೇ ನಾವುಗೆ ಸಂಪತ್ತ್.

ಮಾತಲಿ : ಸೃಷ್ಟಿಕರ್ತರ್ ಹೀಂಗೆ ಪ್ರಸನ್ನರಾದವೆ.

ದುಷ್ಯಂತ : ಪೂಜ್ಯರೇ, ನಿಮ್ಮ ಆಜ್ಞಾನುಸಾರ ನಡಿವ ಈಕೆನ ನಾ

ಗಾಂದರ್ವ ವಿವಾಹಾದ ಹಾಂಗೆ ಮೊದುವೆ ಆದೆ. ಕೆಲವು ಕಾಲದ ಮೇಲೆ ಇದರ ಬಂಧುಗ ನನ್ನ ಆಸ್ಥಾನಕ್ಕೆ ಕರ್ಕರ್ಂಡ್ ಬಾಕನ ಇವಳ ಮೊದುವೆ ಆದ್ದೇ ಮರ್ತ್ ಹೋಗಿ ತಿರಸ್ಕರಿಸಿದೆ. ಇದರ್ಂದ ತಮಿಗೆ ಸಗೋತ್ರರಾದ ಕಣ್ವ ಮುನಿಗಳಿಗೆ ಅಪರಾಧ ಮಾಡ್ದೆ. ಉಂಗಿಲನ ಕಂಡ ಕೂಡ್ಲೇ ಇವಳ ಮೊದುವೆ ಆದ ಸಂಗ್ತಿ ನೆನ್ಪುಗೆ ಬಾತ್. ಇದ್ ನಂಗೆ ಬಾರಿ ಆಸ್ಚರ್ಯದಾಂಗೆ ಕಂಡದೆ. ಅದೇಕೆ ಹಂಗಾತ್, ಆನೆ ಒಂದು ಕಣ್ಣೆದುರೇ ಇರ್ಕನ ಇದ್ ಆನೆನೇ ಅಲ್ಲಾಂತ ಹೇಳಿ, ಅದ್ ಹೋದ ಮೇಲೆ ಅದರ ಹೆಜ್ಜೆನ ನೋಡಿ ಇದ್ ಆನೆನೇಂತ ನಂಬಿದಾಂಗೆ ಆತ್ ನನ್ನ ಅವಿವೇಕ.

ಮಾರೀಚ : ಎಲ್ಯೆ ವತ್ಸ, ಸಾಕ್ ಸಾಕ್, ನಿನ್ನ ತೊಪ್ಪೂಂತ ಗ್ರೇಸ್ ಬೇಡ ನಿಂಗೆ ಹಾಂಗೆ ಮರ್ತ್ ಹೋಗುವಾಂಗೆ ಆದ್ದ್ ಸೆರಿಯಾದ್ದೇ ಕೇಳ್...

ದುಷ್ಯಂತ : ಅಪ್ಪಣೆಯಾಕು.

ಮಾರೀಚ : ದೂರ್ವಾಸ ಮುನಿಗಳ ಸಾಪಂದ ನೀ ಕೈಹಿಡ್ದ ಹೆಣ್ಣ್‌ನ ತಿರಸ್ಕಾರ ಮಾಡ್ದೇ ಹೊರ್ತು ಮತ್ತೆ ಬೇರೇನೂ ಅಲ್ಲ. ಆ ಸಾಪ ಉಂಗಿಲ ಕಂಡಕೂಡ್ಲೇ ವಿಮೋಚನೆ ಹೊಂದಿದೆಂತ ಧ್ಯಾನಂದ ತಿಳ್ದೆ.

ದುಷ್ಯಂತ : (ನಿಟ್ಟುಸುರು ಬುಟ್ಟ್) ಈಗ ನಾ ಆ ಅಪವಾದಂದ ಬುಡುಗಡೆ ಆದೆ.

ಶಕುಂತಳೆ : (ತನ್ನಸ್ಟಕೆ) ದೈವ ಯೋಗಂದ ಆರ್ಯಪುತ್ರ ನನ್ನ ಸುಮ್ಮ ಸುಮ್ಮನೆ ತಿರಸ್ಕರಿಸಿದಲ್ಲ. ಆಗ ನಂಗೆ ನನ್ನ ನೆನ್ಪೇ ಇತ್ಲೆ. ವಿರಹಂದ ಇದ್ದ ನಂಗೆ ಸಾಪ ಬಂದಿರ್ದು. ಹಂಗಾಗಿ ಸಕಿಗ ನಿನ್ನ ಗಂಡಂಗೆ

ಉಂಗಿಲ ತೋಸೂರ್ಂತ ಹೇಳ್ದೊ

ಮಾರೀಚ : (ಶಕುಂತಳೆನ ನೋಡಿ) ಎಲ್ಲೈ ವತ್ಸೆ, ಈಗ ನೀ ಎಲ್ಲಾ ನಿಜನ ತಿಳ್ದೆ. ಇನ್ನು ನೀ ನಿನ್ನ ಗಂಡನೊಟ್ಟಿಗೆ ಸಿಟ್ಟಾಗ್ಬೇಡ. ಜಿಡ್ಡಾದ ಕನ್ನಡಿಲಿ ಪ್ರತಿ ಬಿಂಬ ಸೆರಿಯಾಗಿ ಕಾಣದಾಂಗೆ, ಸಾಪಂದ ನಿನ್ನ ಗಂಡನ ಮನ್ಸ್ ಲಿ ನಿನ್ನ ನೆಂಪು ಬಾರದಾತ್.

ದುಷ್ಯಂತ : ಪೂಜ್ಯರೇ, ಇವಳ್‌ಂದ ತಾನೆ ನನ್ನ ವಂಸ ಉದ್ಧಾರ ಆದು. (ಹೀಂಗೆ ಹೇಳಿ ಕೂಸುನ ತೊಬ್ಬಿಕಂಡದೆ)

ಮಾರೀಚ : ಹೌದು, ನೀ ಹೇಳ್ದ್ ಸೆರಿ. ಈ ಕೂಸು ಮುಂದೆ ಚಕ್ರವರ್ತಿ ಆದೆ. ಸಮುದ್ರನ ದಾಟಿ ಏಳ್ ದ್ವೀಪಗಳ ಮೇಲೆನೂ ತನ್ನ ಪ್ರಭುತ್ವನ ಸ್ಥಾಪಿಸಿದೆ. ಪ್ರಾಣಿಗಳ ಪೀಡ್ಸ್ ತಾ ಇದ್ದರ್‌ಂದ ಇವಂಗೆ ಇಲ್ಲಿ “ಸರ್ವದಮನ” ಂತ ಹೆಸ್ರಾತ್. ಮುಂದೆ ಲೋಕ ರಕ್ಷಣೆ ಮಾಡ್ದರ್‌ಂದ “ಭರತ“ಂತ ಕೀರ್ತಿವಂತನಾದೆ.

ದುಷ್ಯಂತ : ಪೂಜ್ಯರೇ, ತಮ್ಮ ಜಾತಕರ್ಮಾದಿಗಳ್‌ಂದ ಅನುಗ್ರಹಿಸಲ್ಪಟ್ಟ ಈ ಕೂಸುಲಿ ಅಪ್ಪಣೆ ಕೊಡ್ಸಿದರೆಲ್ಲಾ ಶಿರಸಾವಯಿಸಿ ನಡ್ಸಿಕಣೆ.

ದಾಕ್ಷಾಯಣಿ : ಪೂಜ್ಯರೇ, ಮಗಳ ಈ ಕುಸಿ ಕುಸಿ ಸಿಂಯಿ ಸುದ್ದಿನ ಕಣ್ವ ಮುನಿಗಳಿಗೆ ಪರಿಚಾರಕರ ಮೂಲಕ ತಿಳ್ಸೊಕು. ಮಗಳ ಮೇಲೆ ವಾತ್ಸಲ್ಯಂದ ಇರುವ ಮೇನಕೆ ಹೇಂಗೂ ಇಲ್ಲೇ ನನ್ನ ಸೇವೆ ಮಾಡಿಕಂಡ್ ಉಟ್ಟು

ಶಕುಂತಳೆ : (ತನ್ನಷ್ಟಕೆ) ಪೂಜ್ಯೆಯಾದ ದಾಕ್ಷಾಯಣಿ ಹೇಳ್ದ್ ನನ್ನ ಕೋರಿಕೆನೇ ತಾನೆ.

ಮಾರೀಚ : ಪೂಜ್ಯರಾದ ಕಣ್ವ ಮುನಿಗ ತಮ್ಮ ತಪಸ್ನ ಪ್ರಭಾವಂದ ಇದರೆಲ್ಲಾ ತಿಳ್ದವೆ.

ದುಷ್ಯಂತ : ಹಂಗಾಗಿಯೇ ಪೂಜ್ಯರಾದ ಕಣ್ವಮುನಿಗ ನನ್ನ

ಮೇಲೆ ಕೋಪ ಮಾಡಿಕಣ್ತ್ ಲೆ.

ಮಾರೀಚ : ಆದರೂ ಈ ಪ್ರಿಯವಾರ್ತೆನ ನಾವು ತಿಳ್ಸಕಾದ್ ಕ್ರಮ... ಯಾರಲ್ಲಿ? (ಶಿಸ್ಯ ಒಬ್ಬ ಬಂದದೆ)

ಶಿಸ್ಯ : ಪೂಜ್ಯರೇ, ಇಂದನೀ ನಾ ಸಿದ್ದವಾಗೊಳೆ.

ಮಾರೀಚ : ಎಲ್ಯೆ ಗಾಲವನೆ, ಈಗಳೇ ಹೋಗಿ ಪುತ್ರವತಿಯಾದ ಶಕುಂತಳೆನ ಸಾಪ ವಿಮೋಚನೆನೆಂದ ನೆನ್ಪು ಪಡ್ಕಂಡ ದುಷ್ಯಂತ ಸ್ವೀಕಸಿಟ್ಟೊಂತ ನಾವು ಹೇಳ್ದೇಂತ ಹೋಗಿ ಹೇಳ್.

ಶಿಸ್ಯ : ಪೂಜ್ಯರೇ, ತಾವು ಹೇಳ್ದಾಂಗೆ ಮಾಡ್ನೆ(ಹೋದೆ)

ಮಾರೀಚ : ಎಲ್ಯೆ ವತ್ಸ, ನೀ ಕೂಡಾ ಪತ್ನಿ ಪುತ್ರ ಸಮೇತ ಮಿತ್ರನಾದ ಇಂದ್ರನ ರಥಲಿ ನಿನ್ನ ರಾಜಧಾನಿಗೆ ಹೊರ್ಡು.

ದುಷ್ಯಂತ : ಪುಜ್ಯರೇ, ತಮ್ಮ ಆಜ್ಞೆನಾಂಗೆ ಆಗಲಿ.

ಮಾರೀಚ : (ರಾಜನ ನೋಡಿ) ನಿನ್ನ ಪ್ರಜೆಗಳಿಗೆ ಇಂದ್ರ ಬೇಕಾದಸ್ಟ್ ಮಳೆ ಸುರ್ಸಲಿ, ನೀ ದೇವತೆಗಳ ಯಜ್ಞ ಯಾಗ ಮಾಡಿ ತೃಪ್ತಿ ಪಡ್ಸ್, ಹೀಂಗೆ ನಮ್ಮ ಅನ್ಯೋನ್ಯತೆಂದ ಎರಡೂ ಲೋಕಗ ಕಲ್ಯಾಣವಾಗುವಾಂಗೆ ನೂರ್ಕಾಲ ಬಾಳಿ

ದುಷ್ಯಂತ : ಪೂಜ್ಯರೇ, ಶ್ರೇಯಸ್ಸಿಗಾಗಿ ನನ್ನ ಸಕ್ತಿ ಮೀರಿ ಪ್ರಯತ್ನ ಪಟ್ಟನೆ.

ಮಾರೀಚ : ಎಲ್ಯೆ ವತ್ಸನೆ ನಿಂಗೇನ್ ಇನ್ನ್ ಕುಸಿ ಪಡ್ಸಲಿ.

ದುಷ್ಯಂತ : ಇದಕ್ಕಿಂತ ಹೆಚ್ಚಿನ ಕುಸಿ ಬೇರೇನುಟ್ಟು. ನಿಮ್ಮ ಆಸೀರ್ವಾದ ನಾವ್ಗೆ ಯಾಗೋಳು ಹೀಂಗೇ ಇರ್ಲಿ. (ಹೀಂಗೆ ಹೇಳಿ ಮುನಿಗಳ ಕಾಲಿಗೆ ಮೂರು ಜನನೂ ಪ್ರಣಾಮ ಮಾಡುವೆ.)

* * * ತೆರೆ * * *

# ಸತ್ಯ
# ಸುಧಾಮೆ

ಪಾತ್ರಗ:–

1. ಸುಧಾಮೆ
   – ಪಾಟಲೀಪುತ್ರದ  ವ್ಯಾಪಾರಿ ಸುದತ್ತ ಶೆಟ್ಟಿನ ಮಗಳು.
2. ಧನದತ್ತ
   –  ಸೋದರ ಮೈದ್ನ
3. ಕಳ್ಳ
4. ತಳವಾರ
5. ಬ್ರಹ್ಮರಾಕ್ಷಸ

ಹಿಂದೆಂದ ದೊನಿ : ಕೊಟ್ಟ ಮಾತಿಗೆ ತೊಪ್ಪದೆ ಹೇಳ್ದಾಂಗೆ ನಡ್ದ ಕೆಲವು ಜೆನ ಸತ್ಯವಂತರಾಗಿ "ಮಹಾತ್ಮರ್"ಂತ ಕರ್ಸಿಕಂಡೊಳೊ. ಸತ್ಯ ಹರಶ್ಚಂದ್ರನ ಕತೆ, ಪುಣ್ಯಕೋಟೀಂತ ಹೇಳುವ ಹಸುನ ಕತೆನೂ ಸತ್ಯಸಂಧತೆಗೆ ಒಳ್ಳೆ ಉದಾರಣೆಯಾದೆ. ಕನ್ನಡದ ಪ್ರಥಮ ಗದ್ಯ ಗ್ರಂಥಂತ ಹೇಳುವ ಶಿವಕೋಟ್ಯಾಚಾರ್ಯರ "ವಡ್ಡಾರಾಧನೆ"ಲಿ ಬರುವ "ಸುಧಾಮೆ"ಯ ಕತೆನೂ ಸತ್ಯವಂತಳಾದ ಹೆಣ್ಣಿನ ಕತೆ.

ಪಾಟಲೀಪುತ್ರಂತ ಹೇಳುವ ನಗರಲಿ ಇದ್ದ ವ್ಯಾಪಾರಿ ಸುದತ್ತ ಶೆಟ್ಟಿ ಎಂಬವನ ಮಗಳೇ ಸುಧಾಮೆ. ಒಂದು ದಿನ ಈ ಸುಧಾಮೆ ಹಳ್ಳಲಿ ಹೋಗಿ ಮೀಯಿತಾ ಇರ್ಕನ ಒಂದು ಮೊಸಳೆ ಇದರ ಕಾಲ್ನ ಕಚ್ಚಿದೆ...

ಸುಧಾಮೆ : ಅಯ್ಯೋ ಮೊಸಳೆ... ಮೊಸಳೆ... ನನ್ನ ಕಾಲ್ನ ಕಚ್ಚಿಟು, ಯಾರಾರ್ ಬನ್ನಿ ಬುಡ್ಸಿ... ನನ್ನ ಕಾಪಾಡಿ... ಕಾಪಾಡಿ...

ಧನದತ್ತ : (ಈ ಬೊಬ್ಬೆ ಕೇಳಿ ಓಡಿ ಬಂದಂವ... ನೋಡಿ) ನಿನ್ನ ಈ ಮೊಸಳೆಂದ ಕಾಪಾಡ್ರೆ ನೀ ನಾ ಕೇಳ್ದರ ಕೊಟ್ಟಿಯನಾ...?

ಸುಧಾಮೆ : ಖಂಡಿತಾ ನೀ ಏನ್ ಕೇಳ್ರೂ ಕೊಟ್ಟನೆ, ಒಮ್ಮೆ ಮೊಸಳೆಂದ ನನ್ನ ಬುಡ್ಸು, ನಿನ್ನ ದಮ್ಮಯ್ಯ ಒಮ್ಮೆ ಕಾಪಾಡ್....

ಧನದತ್ತ : ಹೆದ್ರ್ ಬೇಡ... ನಿನ್ನ ಕಾಪಾಡ್ನೆ... (ಹೀಂಗೆ ಹೇಳ್ದಂವ

ಹಳ್ಳಕ್ಕೆ ಹಾರಿ, ಮೊಸಳೆ ಬಾಯಿನ ಸೀಳಿ ಸುಧಾಮೆನ ಬೊದ್ಕುಸಿತ್)

ಸುಧಾಮೆ : (ಕುಸೀಂದ) ನನ್ನ ಕಾಪಾಡ್ದ ನಿಂಗೆ ಏನ್ ಬೇಕು ಕೇಳ್, ನಾ ಕೊಟ್ನೆ

ಧನದತ್ತ : ನಂಗೆ ಮತ್ತೇನೂ ಬೇಡ, ನಿನ್ನ ಮೊದುವೆ ದಿನ ಮೊದುಮಗಳಾಗಿ ಅಲಂಕಾರ ಮಾಡಿಕಂಡ್ಯಲ್ಲಾ ಆ ಅಲಂಕಾರನ ಬಂದ್ ನಂಗೆ ತೋರ್ಸೊಕು.

ಸುಧಾಮೆ : ಓ ಅಸ್ಟೇ ತಾನೆ... ಖಂಡಿತಾ ನನ್ನ ಮೊದುಮಗಳ ಅಲಂಕಾರನ ಬಂದ್ ಖಂಡಿತಾ ತೋರ್ಸಿನೆ.

ಹಿಂದೆಂದ ದೊನಿ : ಹೀಂಗೆ ಇರ್ಕನ, ಕೆಲವು ವರ್ಸ ಕಳಿಯಕನ ಸುಧಾಮೆ ಪ್ರಾಯಕ್ಕೆ ಬಾತ್, ಅದರ ಯೋಗ್ಯ ಹೈದಂಗೆ ಕೊಟ್ಟ್ ಮೊದುವೆ ಮಾಡ್ದೊ, ಆ ದಿನ ಹಿಂದೆ ತಾನ್ ಧನದತ್ತಂಗೆ ಕೊಟ್ಟ ಬಾಸೆನ ನೆನ್ದ್ ಮೊದುಮಗಳ ಎಲ್ಲಾ ಅಲಂಕಾರ ಮಾಡಿಕಂಡಿದ್ದ ಸುಧಾಮೆ ನಟ್ಟ ನೊಡು ಇರ್ಲ್ ಹೊರ್ಟ್ ಧನದತ್ತ ಇದ್ದಂತ ಊರಿಗೆ ಇರ್ಲ್ ಹೋಕಂಡ್ ಇರ್ಕನ... ದಾರಿಲಿ ಕಳ್ಳ ಒಬ್ಬ ಇವಳ ಕಂಡ್.

ಕಳ್ಳ : ಏ ಗೂಡೆ ನೀ ಬಾರೀ ಚಿನ್ನ, ವಜ್ರ, ವೈಡೂರ್ಯಗಳ ಹಾಕಂಡ್ ಒಳ ಅದರೆಲ್ಲಾ ಬಿಚ್ಚಿ ನಂಗೆ ಕೊಟ್ಟು ಹೋಗು, ಇಲ್ಲರೆ ನಿನ್ನ ಮುಂದೆ ಹೋಕೆ ಬುಡಿಕಿಲ್ಲೆ

ಸುಧಾಮೆ : ಓ ನಿಂಗೆ ನಾ ಹಾಕಂಡಿರುವ ಒಡವೆಗ ಬೇಕು ಅಸ್ಟೆ ತಾನೆ? ಖಂಡಿತಾ ಕೊಟ್ಟನೆ, ಆದರೆ ನಾ ಈಗ ಒಂದು ಒಳ್ಳ ಕೆಲ್ಸಕ್ಕಾಗಿ ಒಂದ್ ಕಡೆ ಹೋಗ್ತಾ ಒಳೆ, ಅಲ್ಲಿಗೆ ಹೋಗಿ ಬಾಕನ ನನ್ನ ಎಲ್ಲಾ ಒಡವೆಗಳ ನಿಂಗೆ ಕೊಟ್ಟನೆ. ನೀ ಇಲ್ಲೇ ನಾ ಹೋಗಿ ಬಾಕನ ಮುಟ್ಟ ಕಾಯ್ತಾ ಇರ್.

ಕಳ್ಳ : ಆತ್ ನೋಡೊನ, ನೀ ಎಸ್ಟ್ ಸತ್ಯ ಹೇಳಿಯಾಂತ ಎಲ್ಲಿಯಾರ್ ಮೋಸ ಮಾಡಿಕೆ ನೋಡ್ರೆ ನಾ ಬುಡಿಕಿಲ್ಲೆ (ಸುಧಾಮೆ ಕಳ್ಳನ ಒಪ್ಪ್‌ಸಿ ಮುಂದೆ ಹಂಞ ದೂರ ಹೋಕನ ನಗರ ರಕ್ಷಕ ತಳವಾರ ಸಿಕ್ಕಿದೆ)

ತಳವಾರ : ಏಯ್ ಹೆಣ್ಣೇ ಈ ನೊಡು ಇರ್ಲ್ ಎಲ್ಲಿಗೆ ಹೊರ್ಟ್‌ಳ? ಈ ಸಮೆಲಿ ನೀ ಹೋದು ನೋಡ್ರೆ ನೀ ಮರ್ಯಾದಿ ಇರ್ವ ಹೆಣ್ಣ್ ನಾಂಗೆ ಕಾಂಬೊದ್ಲೆ, ಪೋಯಿ ಅರಮನೆಗೆ ನಿನ್ನ ಇಚಾರ್ಣೆ ಮಾಡೊಕು.

ಸುಧಾಮೆ : ಸ್ವಾಮಿ ನಗರ ರಕ್ಷಕರೇ, ನಾ ಅಂತಾ ಕೆಟ್ಟ ಹೆಣ್ಣ್ ಅಲ್ಲಾ, ಒಂದು ಅತೀ ಮುಖ್ಯವಾದ ಕೆಲ್ಸ ಉಟ್ಟು ಅದಕ್ಕಾಗಿ ನಾ ಈ ನಡಿರ್ಲ್ ಹೋಗ್ತಾ ಒಳೆ, ನಾ ಅಲ್ಲಿಗೆ ಹೋಗಿ ಖಂಡಿತಾ ಬನ್ನೆ, ಮತ್ತೆ ನನ್ನ ಎಲ್ಲಿಗೆ ಬೇಕಾರೂ ಕರ್ಕಂಡ್ ಹೋಗಿ ಇಚಾರ್ಣೆ ಮಾಡ್ಸಿ.

ತಳವಾರ : ನೋಡಿಕೆ ಒಳ್ಳವಳಾಂಗೆ ಕಂಡಿಯಾ, ಆತ್ ಬೇಗ ಹೋಗಿ ಬಾ, ಸುಳ್ಳ್ ಗಿಳ್ಳ್ ಹೇಳಿ ತಪ್ಪ್ ಸಿಕೆ ನೋಡ್ರೆ, ನಿಂಗೊಂದು ಗೆತಿ ಕಾಣ್ಸುವೆ, ಜಾಗ್ರತೆ. (ತಳವಾರನ ಒಪ್ಪ್‌ಸಿ ಸುಧಾಮೆ ಮುಂದೆ ಹೋಕನ ಒಬ್ಬ ಬ್ರಹ್ಮರಾಕ್ಷಸ ಸಿಕ್ಕಿದೆ)

ಬ್ರಹ್ಮರಾಕ್ಷಸ : ಓ ಹೆಣ್ಣೇ, ನೀ ರಸಬಾಳೆ ಹಣ್ಣ್, ನಿನ್ನ ಈಗ ತಿಂದ್ ಬುಟ್ಟನೆ ಬಾ, ನಂಗೆ ಹೊಟ್ಟೆ ಹಸಿತಾ ಉಟ್ಟು.

ಸುಧಾಮೆ : ನನ್ನ ತಿಂದಿಯನಾ? ತಿನ್, ಆದರೆ ನಾ ಈಗ ಒಂದು ತುರ್ತು ಕೆಲ್ಸದ ಮೇಲೆ ಒಂದು ಕಡೆ ಹೋಗ್ತಾ ಒಳೆ, ಅಲ್ಲಿಗೆ ಹೋಗಿ ಬೇಗ ಬನ್ನೆ. ನಾ ಹೋಗಿ ಬಾಕನಮುಟ್ಟ ಇಲ್ಲೇ ಇರ್, ಮತ್ತೆ ನೀ ನನ್ನ ತಿನ್ ಏನ್ ಬೇಕಾರ್ ಮಾಡ್, ದಮ್ಮಯ್ಯಾ...

ಈಗ ಒಮ್ಮೆ ಹೋಕೆ ಬುಡು.

ಬ್ರಹ್ಮರಾಕ್ಷಸ : ಜೀವದ ಹೆದ್ರಿಕೆಲಿ ತುರ್ತು ಕೆಲ್ಸಂತ ಹೇಳಿ ತೊಪ್ಪ್ ಸಿಕಣಿಕೆ ನೋಡಿಯಾ ನಾ ಬುಡಿಕಿಲೆ, ಈಗಳೇ ತಿಂದನೆ..

ಸುಧಾಮೆ : ಖಂಡಿತಾ ನಾ ತೊಪ್ಪ್ ಸಿಕಣಿಕೆ ನೋಡವ್ವ್ ಅಲ್ಲಾ, ನನ್ನ ನಂಬು ನಾ ಖಂಡಿತಾ ಹೋಗಿ ಬನ್ನೆ.

ಬ್ರಹ್ಮರಾಕ್ಷಸ : ಆತ್ ಹೋಗಿ ಬೇಗ ಬಾ, ನಂಗೆಸ ಹೊಟ್ಟೆ ಹಸಿಯದ್ರಲ್ಲಿ ಬೊತ್ತ್, ಬಾರದೆ ಇದ್ದರೆ ನೀ ಬೊದ್ಕುವೇಂತ ಮಾತ್ರ ಗ್ರೇಸ್ ಬೇಡ... ಹೋಗು (ಸುಧಾಮೆ ಈ ಮೂರು ಜನರ್ನೂ ಒಪ್ಪ್ ಸಿ ತನ್ನ ಮೈದ್ನ ಧನದತ್ತ ನ ಅಂಗ್ಡಿಗೆ ಹೋಗಿ ಬಾಗ್ಲ್ ತಟ್ಟಿದೆ. ಇತ್ತ ಕಳ್ಳ, ತಳವಾರ, ಬ್ರಹ್ಮರಾಕ್ಷಸ ಮೂರು ಜೆನನೂ ಈ ಹೊತ್ತಿ ತುರ್ತು ಕೆಲ್ಸ ಹೋಗ್ಲೇ ಬೇಕೂಂತ ಎಲ್ಲಿಗೆ ಹೋದೆ ನೋಡೊನೋಂತ ಸುಧಾಮೆಗೆ ಗೊತ್ತಾಗದಾಂಗೆ ಹಿಂದೆಂದ ಬಂದವೆ.)

ಧನದತ್ತ : ಯಾರದ್ ಬಾಗ್ಲ್ ತಟ್ಟುದು ಈ ನೊಡು ಇರ್ಲ್...

ಸುಧಾಮೆ : ನಾ ಸುಧಾಮೆ, ಬಾಗ್ಲ್ ತೆಗಿ...

ಧನದತ್ತ : (ಬಾಗ್ಲ್ ತೆಗ್ದ್, ಮೊದುಮಗಳಾದ ಸುಧಾಮೆನ ನೋಡಿ) ಅಯ್ಯೋ ಈ ನೋಡು ಇರ್ಲ್ ಯಾಕೆ ಬಂದೆ?

ಸುಧಾಮೆ : ನೀ ಅಲ್ಲಾ ಅಂದ್ ನಾ ಮೊದುಮಗಳಾದ ದಿನ ಬಂದ್ ನನ್ನ ಅಲಂಕಾರನ ತೋರ್ಸೊಕೂಂತ ಹೇಳ್ದಂವ. ಹಾಂಗೆ ನಾ ಕೊಟ್ಟ ಬಾಸೆನ ತೀರ್ಸಿಕೆ ಈ ನೊಡು ಇರ್ಲ್ ಬಂದೆ.

ಧನದತ್ತ : ಓ... ಹಂಗೋ... ನೀ ಒಳ್ಳ ಸುರಸುಂದರಾಂಗಿ, ದೇವಲೋಕದ ರಂಬೆ, ಊರ್ವಶಿ ಅಪ್ಸರೆ ಯರಾಂಗೆ ಕಂಡಿಯ. ನಿನ್ನ ಬಾಸೆ ತೀರ್ಸಿಕೆ ಬಂದೊಳ ತುಂಬಾ ಕುಸಿಯಾತ್, ಆದರೆ

ಈ ನೊಡು ಇರ್ಲ್ ಹೆಣ್ಣ್ ಹೆಂಗ್ಸ್ ಒಬ್ಬಳೇ ಓಡಿಯಾಡ್ದು ಒಳ್ಳದಲ್ಲಾ, ಕಳ್ಳರ್, ತಳವಾರರ್ ಸಿಕ್ಕಿ ನಿಂಗೆ ತೊಂದರೆ ಆದು ಬೇಗ ಮನೆಗೆ ಹೋಗು. (ಇವರ ಮಾತ್ ಗಳ ಕೇಳಿಕಂಡಿದ್ದ ಕಳ್ಳ, ತಳವಾರ, ಬ್ರಹ್ಮರಾಕ್ಷಸ ಸುಧಾಮೆ ಹೊರ್ಡಿಕೆ ಮುಂದೇ ಬೇಗ ಬೇಗ ಹೋಗಿ ತಾವಿದ್ದ ಹಿಂದೆನ ಜಾಗಲಿ ನಿತ್ತ್ ಕಂಡೊ. ಸುಧಾಮೆ ಹೊರ್ಟ್ ಬಾತ್)

ಸುಧಾಮೆ : (ಬ್ರಹ್ಮರಾಕ್ಷಸನ ಹಕ್ಕಲೆ ಬಂದ್) ನಿಂಗೆ ಹೇಳ್ದಾಂಗೆ ನಾ ವಾಪಾಸ್ ಬಂದೊಳೆ, ನೀ ನನ್ನ ತಿನೊಕೂಂತ ಇದ್ದ ಅಲ್ಲಾ ತಿನ್, ನಿಂಗೆ ತುಂಬಾ ಹೊಟ್ಟೆ ಹಸ್ದುಟ್ಟು ಅಲ್ಲಾ? ನಿಂಗೆ ಹೇಂಗೆ ಬೇಕೋ ಹಾಂಗೆ ಮಾಡ್...

ಬ್ರಹ್ಮರಾಕ್ಷಸ : ನೀ ಕೊಟ್ಟ ಮಾತ್ನ ಹಾಂಗೆ ನಡೆವ ಹೆಣ್ಣ್, ಅಸ್ಟ್ ಮಾತ್ರ ಅಲ್ಲಾ, ನೀ ಸತ್ಯವಂತೆ, ರೂಪ, ಲಾವಣ್ಯ, ಕಾಂತಿ ಹಾವ ಭಾವ, ವಿಲಾಸ, ಸೌಭಾಗ್ಯಗಳ ಒಡತಿ, ಇಂತಾ ನಿನ್ನ ತಿಂದರೆ ನಂಗೆ ಯಾವ ಗೆತಿ ಬಾದು, ನಾ ನಿನ್ನ ತಿಂಬೊದ್ಲೆ, ನೀ ಹೆದ್ರದೆ ನಿನ್ನ ಮನೆಗೆ ಹೋಗು.

ಸುಧಾಮೆ : (ಅಲ್ಲಿಂದ ಮುಂದೆ ಬಾಕನ ತಳವಾರ ಸಿಕ್ಕಿದೆ) ಓ ನಗರ ರಕ್ಷಕರೇ, ನಾ ಹಿಂದೆ ಬಂದೊಳೆ, ನೀವು ನನ್ನ ಇಚಾರ್ಣೆ ಮಾಡಿಕೆ ಅರಮನೆಗೆ ಕರ್ಕಂಡ್ ಹೋದರೆನಾ ಹೋಗಿ, ನೀವುಗೆ ಏನ್ ಮಾಡೊಕುತುಟ್ಟೋ ಹಂಗೇ ಮಾಡಿ.

ತಳವಾರ : ಕ್ಷಮ್ಸಿ, ನೀವು ಈ ನೊಡು ಇರ್ಲ್ ಬಂದದರ ನೋಡಿ ಕೆಟ್ಟ ಹೆಂಗ್ಸ್ಂತ ಗ್ರೇಸಿದೆ, ತಪ್ಪಾತ್. ನಿಮ್ಮಂತ ಒಳ್ಳವು ಯಾರೂ ಇಲ್ಲೆ, ಕೊಟ್ಟ

ಮಾತ್ನಾಂಗೆ ವಾಪಾಸ್ ಬಂದ ಸತ್ಯವಂತೆ. ನಿಮ್ಮ ಯಾವ ವಿಚಾರ್ಣೆನೂ ಮಾಡುದುಲ್ಲೆ, ನೀವು ನಿಮ್ಮ ಮನೆಗೆ ಹೋಗಿಯಮ್ಮ.

ಸುಧಾಮೆ : (ಮತ್ತೆ ಮುಂದೆ ಬಾಕನ ಸುರೂಲಿ ಸಿಕ್ಕಿದ ಕಳ್ಳ ಸಿಕ್ಕಿದೆ, ಹಾಕಂಡ್ ಇದ್ದ ಎಲ್ಲಾ ಒಡವೆಗಳ ಬಿಚ್ಚಿ ಕಳ್ಳಂಗೆ ಕೊಡಿಕೆ ಬಂದದೆ) ಇಂದನಿ ತಕಣಿ ನಾ ಹಾಕಿದ ಎಲ್ಲಾ ಒಡವೆಗ ಇದರ್ಲಿ ಉಟ್ಟು ತಕಣಿ.

ಕಳ್ಳ : ಬೇಡಮ್ಮಾ ತಾಯಿ, ನಿಮ್ಮಂತ ಸತ್ಯವಂತಳ ಕೈಯಿಂದ ಒಡವೆಗಳ ತಕಂಡ್ ನಾ ಯಾವ ನರ್ಕಕ್ಕೆ ಹೋಗಲಿ, ನಂಗೇನ್ ಇದ್ ಒಂದೇ ಜನ್ಮನೋ, ನಿಮ್ಮ ಈ ಒಡವೆಗಳ ತಕಂಡರೆ ನಾ ಆಕಾಸಲಿ ಸೂರ್ಯ ಚಂದ್ರರಿರುವ ವರೆಗೆ ಬದ್ಕುವೆನಾ? ನಿಮ್ಮ ಕೈಯಿಂದ ತಕಂಡ ಒಡವೆಗ ನಂಗೆ ಶಾಶ್ವತವಾಗಿ ಸಿಕ್ಕುದಾ? ದಕ್ಕುದಾ? ಹಂಗಾಗಿ ನಿಮ್ಮ ಒಡವೆಗ ಒಂದೂ ಬೇಡ, ನೀವು ಸುಖವಾಗಿ ಹೋಗಿ ಬನ್ನಿ, ನಿಮ್ಮಂತ ಸತ್ಯವಂತರ್ ಲೋಕಲಿ ಹೆಚ್ಚಾಗಲಿ, ಸತ್ಯಕ್ಕೆ ಜಯ ಆಗಿಯೇ ಆದೆ, ಎಲ್ಲವೂ ಸತ್ಯವಂತರಾಗಿ ಬಾಳಲಿ. ನಾನೂ ಇನ್ನುಮುಂದೆ ಕಳ್ಳತನ ದರೋಡೆ ಖಂಡಿತಾ ಮಾಡುದುಲ್ಲೆ. (ಹಂಗೆ ಹೇಳಿ ಕಳ್ಳ ಸುಧಾಮೆನ ಕಾಲಿಗೆ ಬಿದ್ದದೆ) ಎದ್ದೇಳಿ ದೇವ್ರು ಒಳ್ಳದ್ ಮಾಡಲಿ.

ಸುಧಾಮೆ : ಈ ಲೋಕಲಿ ಸುಳ್ಳುಗೆ ಬೆಲೆ ಇಲ್ಲೆ, ಸತ್ಯಕ್ಕೆ ಸಾವಿಲ್ಲೆಂತ ಗೊತ್ತಾತಲೆ. (ಹೀಂಗೆ ಹೇಳಿ ತನ್ನ ಮನೆಗೆ ಹೋದೆ)

* * * ತೆರೆ * * *

# ಕಾನೇಸ್ಮಾರಿ

ಪಾತ್ರಗ :–

1. ತಂಗಮ್ಮ (ಸಾಲೆ ಟೀಚರ್)
2. ಗೌರಜ್ಜಿ (ಬಡೆ ಅಜ್ಜಿ)
3. ದೇಚಮ್ಮ (ತಾಲೋಕು ಆಪೀಸಿನ ಕ್ಲಾರ್ಕ್)

ತಂಗಮ್ಮ : (ತನ್ನಷ್ಟಕೆ) ಸಾಕಪ್ಪಾ ಸಾಕ್ ಈ ಜೆನಗಳ ಲೆಕ್ಕ ತೆಗಿವ ಕೆಲ್ಸ. ಈ ಉರಿ ಬಿಸ್ಲಿಗೆ ನಡ್ದ್ ನಡ್ದ್ ಸಾಕಾತ್. ಒಂದೊಂದು ಮನೆ ಸಿಕ್ಕೊಕಾರೆ ಒಂದೆರ್ಡ್ ಕಿ.ಮೀ.ರೇ ನಡಿಯೊಕು. ತಿರ್ಗೀ ತಿರ್ಗಿ ಬೊಚ್ಚಿಬಂದ ಟೀಚರ್‌ಂತ ಒಂದು ಗಲಾಸ್ ಕಾಪಿನೋ, ಜೂಸೋ ಬುಡಿ ನೀರೂ ಕೆಲವು ಮನೆಲಿ ಸಿಕ್ಕುದುಲ್ಲೆ. ಮನೆಗೆ ಬಂದವರ ಕುದ್ರಿಕೂ ಹೇಳದೆ ಕೆಲ್ಸದ ಗಡಿಬಿಡಿ ತೋರ್ಸಿ ಸಾಗ್ಹಾಕೊವೇ ಹೆಚ್ಚ್. ಇನ್ನು ಕೆಲವು ಎಸ್ಟೇಟ್ ಯಜ್ಮಾನಂಗ ಗೇಟ್‌ನ ಹೊರೆಗೇ ನಿಲ್ಸಿ ಕಾಕೆ ಲೆಕ್ಕ ಬಿಸಾಕಿ ಓಡ್ಸುವೆ. ಒಂದು ಗಲಾಸ್ ತಣ್ಣಂಗೆ ಮೊಜ್ಜಿಗೆನೋ, ಜೂಸೋ ಸಿಕ್ಕೊಕಾರೆ ಆ ಕುಂದುನ ಕೊಡಿಲಿರುವ ಗೌರಜ್ಜಿನ ಮನೆಗೇ ಹೋಕು. ಪಾಪ ಗೌರಜ್ಜಿ ಸಿರಿವಂತಲ್ಲರೂ ಅದರ ಹರ್ದಯ ಸಿರಿವಂತಿಕೆ ದೊಡ್ಡದ್. ಬಂದವರ ನೆಗಾಡಿಕಂಡ್ ಪ್ರೀತಿಂದ ಮಾತಾಡ್ಸ್ ಕನ ಹೊಟ್ಟೆ ತುಂಬೊಕು. ನನ್ನಂತ ಟೀಚರ್ ಗಳ ಕಂಡರಂತೂ ಎಲ್ಲಿಲ್ಲದ ಪ್ರೀತಿ, ಕರುಣೆ. ಆಹಾ! ಈ ಕಾಪಿ ಹಣ್ಣಾಗಿ ಹವಳ ಪೋಣ್ಸಿದಾಂಗೆ ಕೆಂಪು ಕೆಂಪಾಗಿ ಕಾಂಬ ಸೊಬಗೇನ್, ಹೂಂ ಇನ್ನು ನೂರೊಕ್ಲು ಬೆಟ್ಟದ ದಾರಿ ಹಿಡಿಯೊದೇ ಒಳ್ಳೆದ್... (ಕುಂದುನ ಮೊಟ್ಟೆ ಹತ್ತಿಯಾಕನ...)

ಗೌರಜ್ಜಿ : (ತನ್ನಷ್ಟಕೆ ಕೂಸುನ ಆಡ್ಸಿಕಂಡ್)

**ತೋಳು ತೋಳು ತೋಳು**

**ತೊಳನಾಡಿ ಬಾಕನ, ಕಳ್ಳ ನಾಯಿ ಕಚ್ಚಿತ್**

**ಬೊಳ್ಳ ನಾಯಿ ಬೊಗುಳ್ತ್**

**ಮೊದ್ದು ಹೇಳ್ ಮಾವಯ್ಯ**

**ಮೊದ್ದುನ ಚೀಲ ಮನೆಲಾತ್**

**ದುಡ್ಡುನ ಚೀಲ ಕೈಲಾತ್**

**ತೋಳು ತೋಳು ತೋಳು...**

ತಂಗಮ್ಮ : (ಹಂಙ ಹೊತ್ತು ದೂರಲಿ ನಿತ್ತ್ ಅಜ್ಜಿನ ಹಾಡ್ ಕೇಳ್ತ್, ಕೂಸುನ ಕಾಲ್ಲಿ ಮಲ್ಗಿಸಿಕಂಡ್, ಕೂಸುನ ಕೈ ಹಿಡ್ದ್ ಆಡ್ಸುದರ ನೋಡಿಕಂಡಿರ್ಕನ ನಾಯಿನ ಬೊಗಳಾಟಕ್ಕೆ ಅಜ್ಜಿ ಕೂಸುನ ಅಲ್ಲೇ ಮೊಂದ್ರಿ ಮೇಲೆ ಮಲ್ಗಿಸಿ ಕಣ್ಣ್ ಗೆ ಕೈ ಹಿಡ್ದ್ ನೋಡಿ)

ಗೌರಜ್ಜಿ : ಯಾರ್... ಯಾರದ್...

ತಂಗಮ್ಮ : ನಾ ಅಜ್ಜಿ ತಂಗಮ್ಮ, ನಿಮ್ಮ ಸಾಲೆ ತಂಗು ಟೀಚರ್.

ಗೌರಜ್ಜಿ : ಓ ಟೀಚರಮ್ಮನೋ, ಬನ್ನಿ... ಬನ್ನಿ... ಕುದ್ರಿ (ಕುದ್ರಿಕೆ ಇದ್ದ ಒಂದೇ ಒಂದು ಕುರ್ಸಿನ ಎಳ್ದ್ ಇಸಿದೆ) ಕುಡಿಯಕೆ ಏನಾರ್ ಬೇಕ ಮಗಾ? ಎಸ್ಟ್ ದೂರಂದ ಈ ಉರಿ ಬಿಸ್ಲಿಗೆ ಈ ಬೆಟ್ಟ ಹತ್ತಿ ಬಂದೊಳರಿ, ಇರಿ ಕುಡಿಯಕೆ ತನ್ನೆ. (ಒಳೆಗೆ ಹೋದೆ)

ತಂಗಮ್ಮ : (ಜೆನಗಣತಿನ ಪೇಪರ್ಗಳ ತೆಗ್ದ್, ಸೆಕೆಗೆ ತನ್ನ ಸೆರ್‌ಂಗ್‌ಂದಳೇ ಗಾಳಿ ಹಾಕಿಕಂಡ್) ಅಜ್ಜಿ ಈ ಕೂಸು ಪಿಳ್ಳೆನೋ?

ಗೌರಜ್ಜಿ : ಇದ್ ನನ್ನ ಮಂಜನ ಕೂಸು ಮಗಾ. (ಹೀಂಗೆ ಹೇಳಿಕಂಡ್ ಬಂದ್ ಚೊಂಬುಲಿ ತುಂಬಾ ಮೊಜ್ಜಿಗೆ ತಂದ್ ಗಲಾಸಿಗೆ ಬೊಗ್ಗ್ ಸಿ ಬೊಗ್ಗ್ ಸಿ ಕೊಟ್ಟ್ ಕಂಡ್) ಈ ಸತ್ತಿ ಎಂತಾ ಲೆಕ್ಕ ಕೋಳಿ ಹಂದಿ ಲೆಕ್ಕ ತೆಗಿಯಕೆ ಬಂದದಾ?

ತಂಗಮ್ಮ : ಕೋಳಿ ಹಂದಿ ಲೆಕ್ಕ ಅಲ್ಲಜ್ಜಿ, ಇದ್ ಕಾನ್ಸೇಸ್ಮಾರಿ, ಅಂದರೆ ಜೆನರ ಲೆಕ್ಕತೆಗಿವ ಕೆಲ್ಸ, ಮೊಜ್ಜಿಗೆ ಬಾರಿ ಲಾಯಿಕ್ ಉಟ್ಟು ಅಜ್ಜವ್ವಾ, ಹಸಿಮೆಣ್ಸ್, ಸೂಂಟಿ ಉಪ್ಪು ಎಲ್ಲಾ ಹಾಕಿ ಪೊರ್ಮ್ಗಳ ಬಂದದೆ. ನಿಮ್ಮ

ಮನೆಲಿ ಯಾರೆಲ್ಲಾ ಒಳರಿ? ಅವರ ಪ್ರಾಯ, ಕೆಲ್ಸ ಹೀಂಗೆ ಎಲ್ಲಾ ಲೆಕ್ಕ ತಕಣಕು.

ಗೌರಜ್ಜಿ : ಸೆರಿ ಹಂಗಾರೆ ಏನೆಲ್ಲಾ ಬೇಕೊ ಕೇಳಿ ಬರ್ಕಣಿ, ಇನ್ನೂ ಎಸ್ಟ್ ಮನೆ ಸುತ್ತಿಕೆ ಉಟ್ಟೋ ಏನೋ?

ತಂಗಮ್ಮ : ಮನೆ ಹಿರಿಯವು ನೀವು ಮಾತ್ರನಾ?

ಗೌರಜ್ಜಿ : ನಾನೇ ಹಿರಿಯವುಳು, ಕಾಡ್ ಬಾಂತ ಹೇಳ್ದೆ, ಊರು ಹೋಗುಂತ ಹೇಳ್ದೆ.

ತಂಗಮ್ಮ : ಮತ್ತೆ ಮಕ್ಕ?

ಗೌರಜ್ಜಿ : ನನ್ನ ಮಂಜ ಕುಟ್ಟಪ್ಪ, ಅಂವನ ಮಂಜ ಈ ಕೂಸು ಅಚ್ಚಯ್ಯ.

ತಂಗಮ್ಮ : ಮಂಜನ ಪ್ರಾಯ? ಕೆಲ್ಸಾ?

ಗೌರಜ್ಜಿ : ಅವಂಗೆ ವರ್ಸ ಮೂವತ್ತೈದ್, ಕೆಲ್ಸ ತೋಟದಕೆಲ್ಸ. ನಮ್ಮ ಈ ಎರ್ಡ್ ಎಕ್ರೆ ತೋಟಲಿ ಕೆಲ್ಸ. ಆದರೆ, ಹೊರೆಗೆ ಕೆಲ್ಸಕ್ಕೂ ಹೋದೆ.

ತಂಗಮ್ಮ : ನಿಮ್ಮ ಸೊಸೆ?

ಗೌರಜ್ಜಿ : (ಸೆರ್‌ಂಗ್‌ಂದ ಕಣ್ಣೀರ್ ಪೂಜಿಕಂಡ್) ಅದ್ ಎಂತಾ ಕೇಳಿರೆ ಟೀಚರ್, ಅದೊಂದು ದೊಡ್ಡ ಕತೆ, ನನ್ನ ಸೊಸೆ, ನಮ್ಮ ಮನೆನ ಭಾಗ್ಯ ಲಚ್ಚಿಮಿನ ಒಳ್ಸಿಕಂಬಕೆ ನಾವುಗೆ ಪುಣ್ಯ ಇಲ್ಲೆ ನೋಡಿ. ಕಳ್ದ ವರ್ಸ ಅದೆಂತದೋ ಹೊಸ ಕಾಯಿಲೆ ಕೊರೋನಾ ಗಡ, ಅದ್ ಬಂದ್ ಆಸ್ಪತ್ರೆಗೆ ಸೇರ್ಸಿದ್ ಒಂದೇ ಗೊತ್ತು, ನಾವು ಅಲ್ಲಿಗೆ ಹೋಗುವಾಂಗೆ ಇಲ್ಲೆ, ನೋಡಿಕೆ ಬುಡ್ದುಲೆ, ವಾರಲಿ ಆ ಪುಣ್ಯಾತ್ಗಿತ್ತಿನ ದೇವ್ರು ಕರ್ಸಿಕಂತ್. ಆ ಕಣ್ಣಿಲ್ಲದ ದೇವ್ರ್‌ಗೆ ಈ ಮುದಿ ಜೀವ ಬೇಡಾತ್, ಬೊದ್ಕಿ ಬಾಳಕಾದ ಎಳೆ ಜೀವವೇ ಬೇಕಾತ್.

ತಂಗಮ್ಮ : ಏನ್ ಮಾಡ್ದು ಹೇಳಿ? ಎಲ್ಲಾ ದೇವ್ರ ಇಚ್ಚೆ, ನೀವು

ಸಮಾದಾನ ಮಾಡಿಕಣಿ. ಸಾವು ಇಲ್ಲದ ಮನೆನ ಸಾಸುವೆ ಎಲ್ಲೂ ಸಿಕ್ಕಿಕಿಲೆ ಅಲ್ಲಾ?

ಗೌರಜ್ಜಿ : ಹೋಗಲಿ ಬುಡಿ ನನ್ನ ಹಾಲಾವಲೆ. ನೀವೆಲ್ಲಾ ಟೀಚರಮ್ಮಗ ಹೀಂಗೆ ಮನೆ ಮನೆ ಸುತ್ತಿಕಂಡಿದ್ದರೆ ಅಲ್ಲಿ ಸಾಲೆಲಿ ಮಕ್ಕಳಿಗೆ ಪಾಟ ಮಾಡೊವು ಯಾರ್? ಈ ಕೆಲ್ಸಕ್ಕೆ ನಿಮ್ಮಂತ ಹೆಣ್ಣ್ ಮಕ್ಕಳ್ನೇ ಯಾಕೆ ಕಳ್ಸುವೆ? ಕಾಲ ಕೆಟ್ಟ್ ಹೋಗುಟು, ಹೆಣ್ಣ್ ಮಕ್ಕ ಹೀಂಗೆ ಒಬ್ಬೊಬ್ಬನೇ ಓಡಿಯಾಡಿಕೆ ಆಗದ್.

ತಂಗಮ್ಮ : (ತನ್ನಸ್ಟಕೆ) ಅಜ್ಜಿನ ಈ ಪ್ರಸ್ನೆಗಳಿಗೆ ಏನ್ ಉತ್ತರ ಹೇಳಲಿ? ಹೇಳ್ರೂ ಅಜ್ಜಿಗೆ ಅದ್ ಅರ್ಥ ಆದೋ? ಈಗೀಗ ಸರ್ಕಾರಕ್ಕೆ ಮಾಸ್ಟ್ರ್‌ಗ ಪಾಟ ಮಾಡ್ದು ಮುಖ್ಯ ಅಲ್ಲ. ಜೆನಗಣತಿಂದ ಹಿಡ್ದ್ ದನಗಣತಿ ವರೇಗೆ ಎಲ್ಲಾ ಲೆಕ್ಕ ತೆಗಿವ ಕೆಲ್ಸ ಈ ಮಾಸ್ಟ್ರ ಗಳಿಗೇ. ಇದಲ್ಲದೆ ಜಾತಿವಾರ್ ಲೆಕ್ಕನೂ ಈ ಜಾತ್ಯತೀತ ದೇಸಲಿ ತೆಗಿಯಕಾದೆ! ಕ್ಲಾರ್ಕ್ ಕೆಲ್ಸಂದ ಹಿಡ್ದ್ ಪಿವೋನ್ನ ಕೆಲ್ಸನೂ ಮಾಸ್ಟ್ರ ಗಳೇ ಮಾಡೊಕು. ಎಲ್ಲನೂರ್ ಬರಗಾರರಾಗಿ ಮಾಡಿಕೆ ಅಧಿಕಾರಿಗ ಹೇಳ್ದರ ಕಮಕ್ ಕಿಮಕ್‌ಂತ ಹೇಳದೆ ಮಾಡೊಕು. ಇನ್ನು ಓಟುನ ಸಮೆಲಿ ಮನೆಲಿ ಸತ್ತ ಅವ್ವನ ಹೆಣನ ಬುಟ್ಟೂ ಅವುಕರ್ದಲ್ಲಿಗೆ ಓಡಿ ಹೋಕು. ಇದೆಲ್ಲಾ ರಾಷ್ಟ್ರೀಯ ಕೆಲ್ಸಂತಾದರ್‌ಂದ ಮಾಸ್ಟ್ರ್‌ಗ ಮಾಡದೆ ಇರಿಕೆ ಆದೆನಾ? ಈ ರೀತಿನ ರಾಷ್ಟ್ರ ಕೆಲ್ಸಗಳ ಮಾಸ್ಟ್ರ ಗಳೊಟ್ಟಿಗೆ ಮಾಡ್ಸ್ ತಾ ಮುಂದೆ ರಾಷ್ಟ್ರ ಕಟ್ಟಕಾದ ಮಕ್ಕಳ ಜೀವಂತ ಕೊಲೆನ ಮಾಡ್ಸ್ ತಾ ಒಳೋಂತ ಅಜ್ಜಿಗೆ ಹೇಳ್ರೆ ಅರ್ಥಾದೋ? (ಪ್ರಕಾಸ) ಇದ್ ಸರ್ಕಾರದ ಕೆಲ್ಸ ಅಜ್ಜಿ ಇದರ ನಾವು ಮಾಡುದುಲ್ಲೇಂತ ಹೇಳುವಾಂಗೇ ಇಲ್ಲೆ. ಎಸ್ಟ್

ಕಸ್ಟಾದರೂ ಮಾಡೊಕೇ.

ಗೌರಜ್ಜಿ : ಹಂಗೋ ಏನ್ ಮಾಡ್ದು, ನಿಮ್ಮೆಲ್ಲಾ ಆ ದೇವ್ರೇ ಕಾಪಾಡೊಕು.

ತಂಗಮ್ಮ : (ಅಜ್ಜಿಂದ ಎಲ್ಲಾ ವಿವರ ಕೇಳಿ ಬರ್ಕಂಡ್) ಆತ್ ಅಜ್ಜಿ ನಾ ಹೋಗಿ ಬನ್ನೆ.

ಗೌರಜ್ಜಿ : ಜಾಕ್ರ್ತೆ, ಹೋಗಿ ಬನ್ನಿ ಟೀಚರ್.

ತಂಗಮ್ಮ : (ಅಲ್ಲಿಂದ ಮೂರು ಕಿ.ಮೀ. ನಡ್ದ್ ಮತ್ತೊಂದು ಮನೆನ ಬಾಗ್ಲ್ ತಟ್ಟಿದೆ)

ದೇಚಮ್ಮ : ಯಾರದ್?

ತಂಗಮ್ಮ : ನಾ ಸಾಲೆ ಟೀಚರ್, ಜೆನರ ಲೆಕ್ಕ ತೆಗಿಯಕೆ ಬಂದೊಳೆ.

ದೇಚಮ್ಮ : ಓ... ಟೀಚರೋ... ನೀವ್ಗೆ ಮಾಡಿಕೆ ಬೇರೆ ಕೆಲ್ಸ ಇಲ್ಲೆನಾ? ಎಂತಾ ಲೆಕ್ಕ? ವರ್ಸಕ್ಕೆ ಎಸ್ಟ್ ಸತ್ತಿ?

ತಂಗಮ್ಮ : ಇದ್ ಹತ್ತ್ ವರ್ಸಕ್ಕೊಮ್ಮೆ ಮಾಡುವ ಜೆನಗಣತಿ, ಅದೆಲ್ಲಾ ಓಟುನವರ ಲೆಕ್ಕ, ಮಕ್ಕಳ ಲೆಕ್ಕಗ ಅದ್ ಬೇರೆ.

ದೇಚಮ್ಮ : ಆತ್... ಆತ್... ಅದೇನ್ ಬೇಕೊ ಬೇಗ ಬರ್ಕಣಿ. ನಂಗೆ ಎಸ್ಟೋ ಕೆಲ್ಸ ಉಟ್ಟು.

ತಂಗಮ್ಮ : ಈ ಮನೆ ಯಜಮಾನ್ರ್?

ದೇಚಮ್ಮ : ನಾನೇ ಈ ಮನೆಗೆ ಯಜಮಾನ್ತಿ.

ತಂಗಮ್ಮ : ನಾವುಗೆ ಯಾರಾದರೆ ಏನ್? ನಿಮ್ಮ ಹೆಸ್ರ್?

ದೇಚಮ್ಮ : ಮಿಸೆಸ್ ದೇಚಮ್ಮ.

ತಂಗಮ್ಮ : ನಿಮ್ಮ ಕೆಲ್ಸ?

ದೇಚಮ್ಮ : ತಾಲೋಕು ಆಪೀಸ್ಲಿ ಡಿ.ಸಿ.

ತಂಗಮ್ಮ : ಮೇಡಂ, ತಾವು ಡಿ.ಸಿ.ನೋ? ತಾಲೋಕು ಆಪೀಸಿಗೂ ಡಿ.ಸಿ ಒಳನೋ?

ದೇಚಮ್ಮ : ಡಿ.ಸಿ.ಂತ ಹೇಳ್ರೆ ಡಿಸ್ಪೇಚ್ ಕ್ಲರ್ಕ್.

ತಂಗಮ್ಮ : ಓ ಹಂಗೆನೋ. ನಿಮ್ಮ ಗಂಡ? ಅವರ ಕೆಲ್ಸ?

ದೇಚಮ್ಮ : ಮಿಸ್ಟರ್ ಬಿದ್ದಪ್ಪ, ಕೆಲ್ಸ.. ಮನೆಕೆಲ್ಸ.

ತಂಗಮ್ಮ : ಹಂಗೆ ಮನೆಕೆಲ್ಸಂತ ಹೇಳ್ರೆ?

ದೇಚಮ್ಮ : ಅದೇ ಅಡಿಗೆ ಮಾಡ್ದು, ಪಾತ್ರೆ ಪಗ್ಡಿ ತೊಳಿಯೊದು ಹೀಂಗೆ.

ತಂಗಮ್ಮ : ಸೆರಿ ಗೃಹ ಕೃತ್ಯಂತ ಬರ್ಕಣೆ, ನಿಮ್ಮ ವಯಿಸ್?

ದೇಚಮ್ಮ : ಮೂವತ್ತೈದ್.

ತಂಗಮ್ಮ : ನಿಮ್ಮ ಗಂಡಂಗೆ?

ದೇಚಮ್ಮ : ಐವತ್ತೆಂಟ್.

ತಂಗಮ್ಮ : ನೀವುಗೆ ಮಕ್ಕ?

ದೇಚಮ್ಮ : ಒಬ್ಬೊಳು ಮಗ, ಹೆಸ್ರ್ ಮಿಸ್ ಮೋನಿಕ.

ತಂಗಮ್ಮ : ಮಗಳ ವಯಸ್ಸ್?

ದೇಚಮ್ಮ : ಇಪ್ಪತ್ತೈದ್.

ತಂಗಮ್ಮ : ಏನ್ ಮೇಡಂ, ನೀವುಗೆ ಹತ್ತ್ ವರ್ಸಕ್ಕೇ ಕೂಸು ಹುಟ್ಟಿತಾ?

ದೇಚಮ್ಮ : ಹಾಲಿಗೆ ಬಂದವಂಗೆ ಎಮ್ಮೆ ಕ್ರಯ ಯಾಕೆ? ನಾ ಏನ್ ಹೇಳ್ನೆನೋ ಅದರ ಬರ್ಕಣಿ ಅಸ್ಟೇ

ತಂಗಮ್ಮ : ಸೆರಿ ನೀವು ಹೇಳ್ದಾಂಗೆ ಬರ್ಕಣೆ, ಆದರೆ ಯಾರಾರ್‌ಕೇಳ್ರೇಂತ?

ದೇಚಮ್ಮ : ಅದೆಲ್ಲಾ ನೀವುಗೆ ಯಾಕೆ? ನಾ ಹೇಳ್ದರ ಬರ್ಕಂಬೊದು ನಿಮ್ಮ ಕೆಲ್ಸ., ಸೆರಿ ಇಲ್ಲೇಂತಾದರೆ ಎದ್ದ್ ಹೋಗಿ.

ತಂಗಮ್ಮ : ಸೆರಿ ಮೇಡಂ, ನೀವು ಹೇಂಗೂ ತಾಲೋಕು ಆಪೀಸ್ನವು, ನೀವುಗೆ ಎಲ್ಲಾ ಗೊತ್ತಿರ್ದು. ನೀವು ಹೇಳ್ದರ ಬರ್ಕಣೆ. (ಬರ್ಕಂಡದೆ, ಅಲ್ಲಿಂದ ಹೊರ್ಟ್ ದಾರಿಲಿ ಬಬರ್ತಾ) (ತನ್ನಸ್ಟಕೆ) ಎಂತೆಂತಾ ಜೆನ ಒಳೊ? ಈ ಹೆಂಗ್ಸಿಗಳಿಗೂ ಏನ್ ಹಂಕಾರ? ಬಾಯಿಗೆ ಬಂದಾಂಗೆ ಹೇಳುವೆ, ಅವು ಏನ್ ಹೇಳ್ರೂ ನಾವು ಬರ್ಕಣೊಕು ಗಡ?

ನಾವುಗೆ ತಲೆನೇ ಇಲ್ಲೇಂತ ಗ್ರೇಸಿಯೊಳೊ, ಪಾಪದ ಟೀಚರ್ಗ ಅಲ್ಲಾ? ಸಾಕಪ್ಪಾ ಸಾಕ್ ಈ ಕಾನೇಸ್ಮಾರಿ ಕೆಲ್ಸ... ಮನ್ನೆ ಪೊನ್ನತಮೊಟ್ಟೆಲಿ ಯಾರೋ ಒಬ್ಬ ನಾವುಗೆ ಚಿಮಿಣಿ ಎಣ್ಣೆ ಸಿಕ್ಕುಲೆ, ಅಕ್ಕಿಗೆ ಮೂರು ದಿನ ಕ್ಯೂ ನಿಲ್ಲೊಕು. ಸಕ್ಕರೆ ಬಂದರೆ ಅದೆಲ್ಲಾ ಸೊಸೈಟಿ ಮೆಂಬರ್‌ಗಳಿಗೇ ಆತ್, ನಾವುಗೆ ನಿಮ್ಮ ಜೆನಗಣತಿನೂ ಬೇಡ ದನಗಣತಿನೂ  ಬೇಡಾಂತ ಪಾಪದ ಮಾಸ್ಟ್ರ ಓಡ್ಸಿಯೇ ಬುಟ್ಟೊ ಗಡ. ಹೂಂ... ಏನ್ ಮಾಡ್ದು... ಸರ್ಕಾರದ ಕೆಲ್ಸ ದೇವ್ರ ಕೆಲ್ಸಂತ ಮಾಡೊಕು ಅಷ್ಟೇ. (ಹೋದೆ)

* * * ತೆರೆ * * *

# ಭಕ್ತ
# ಸುಧಾಮ

ಪಾತ್ರಗ

1. ಸುಧಾಮ
2. ಸೌಧಾಮಿನಿ
3. ಮೂರು ಮಕ್ಕ
4. ಶ್ರೀಕೃಷ್ಣ
5. ರುಕ್ಮಿಣಿ
6. ಸತ್ಯಭಾಮೆ
7. ದ್ವಾರಪಾಲಕ
8. ಮಾದಣ್ಣ
9. ಗೋಪಣ್ಣ

**(ಸುಧಾಮನ ಮುರ್ಕುಲು ಗುಡ್ಸಿಲ್ – ಶ್ರೀಕೃಷ್ಣನ ಮೂರ್ತಿನ ಹಕ್ಕಲೆ ಸೌಧಾಮಿನಿ ಕುದ್ದ್ ಕಂಡ್ ಪ್ರಾರ್ಥನೆ ಮಾಡ್ದೆ)**

**ದಾರಿ ಕಾಣದಾಗುಟು ಎಲೆ ಮುರಾರಿಯೆ**
**ಕರುಣೆ ತೋರು ನಮ್ಮ ಮೇಲೆ ಶ್ರೀ ಹರಿಯೆ**
**ದಿನದ ಗಂಜಿಗೂ ಯಾವ ಗೆತಿನು ಇಲ್ಲೆಯಾ**
**ಮನದ ಬೇಗೆ ಹೇಂಗೆ ಸೈಸುದು ಹೇಳ್ ಯಾ**
**ಹಸಿವೂಂತ ಮರ್ಡ್ ವ  ಮುದ್ದು ಮಕ್ಕಯಾ**
**ಹಸಿವು ತೀರುವಾಂಗೆ ನೀ ದಯೆ ತೋರುಯಾ**
**॥ ದಾರಿ ಕಾಣದಾಗುಟು ॥**

ಸೌಧಾಮಿನಿ : ಶ್ರೀ ಕೃಷ್ಣಾ!... ಕೃಷ್ಣಾ!!... ಬಡವರ ಬಂಧು... ಈ ನಮ್ಮ ಬಡ ಸಂಸಾರದ ಗೋಳುನ ನೀ ಕೇಳ್ದುಲ್ಲೆನಾ? ಒಂದು ಹೊತ್ತ್ನ ಗಂಜಿಗೂ ಗೆತಿ ಇಲ್ಲದೆ ಪರ್ದಾಡುವ ನಾವುಗೆ ಮಕ್ಕಳ ಯಾಕೆ ಕೊಟ್ಟ? ಅವು ದಿನಾ ಹೊಟ್ಟೆ ಇಸಿದೆ... ಹಸ್ತದೇಂತ ಮರ್ದುದರ ನೋಡಿಕೆ ಬೊತ್ತು. ಈ ಹೆತ್ತ ಅಯ್ಯೆ ಮಕ್ಕಳ ಗೋಳುನ ಹೇಂಗೆ ಸಯಿಸುದು. ದೇವ್ರೇ... ಭಗವಂತ. ನಮ್ಮ ಮೇಲೆ ಕನಿಕರ ತೋರ್ಸು ದೇವಾ! (ಮೂರು ಜೆನ ಮಕ್ಕ ಓಡಿಕಂಡ್ ಬಂದವೆ)

3ನೇ ಕೂಸು : ಅವ್ವಾ... ಹೊಟ್ಟೆಯಿಸಿದೆ... ಏನಾರ್ ತಿಂಡಿ ಕೊಡವ್ವಾ?

2ನೇ ಕೂಸು : ಅವ್ವಾ... ನಿನ್ನೆಂದ ಗಂಜಿನೇ ಇಲ್ಲೆ... ನಾವು

ಉಂಡತೇ ಇಲ್ಲೆ... ಈಗಾರ್ ಇಕ್ಕವ್ವಾ.

3ನೇ ಕೂಸು : ಅವ್ವಾ ನಮ್ಮೊಟ್ಟಿಗೆ ಕೋಪನಾ? ಯಾಕವ್ವಾ ನೀ ಮಾತಾಡುದುಲ್ಲೆ? ಹೊಟ್ಟಯಿಸುದರ್ಲಿ ತಡಿಯಕೆ ಬೊತ್ತವ್ವಾ ಏನಾರ್ ತಿಂಡಿನಾರ್ ಕೊಡವ್ವಾ.

ಸೌಧಾಮಿನಿ : ಮುದ್ದು ಮಕ್ಕಳೇ... ನಿಮ್ಮ ಮೇಲೆ ನಾ ಯಾಕೆ ಕೋಪ ಮಾಡಲಿ? ಆದರೆ...

1ನೇ ಕೂಸು : ಆದರೆ ಏನವ್ವಾ?

ಸೌಧಾಮಿನಿ : ಆದರೆ ನಾ ಎಂತರ ಕೊಡಲಿ?

2ನೇ ಕೂಸು : ದೋಸೆ ಅಕ್ಕ್, ಇಲ್ಲರೆ ಗಂಜಿನೂ ಆದು, ಯಾವ ತಿಂಡಿನೂ ಅಕ್ಕ್, ಎಂತಾರ್ ಕೊಡವ್ವಾ.

ಸೌಧಾಮಿನಿ : ಮನೆಲಿ ಏನೂ ಇಲ್ಲೆ ಕಂದಾ, ಆದರೆ ಈಗ ಅಪ್ಪ ಬಂದವೆಲ್ಲಾ ಆಗ ತಿಂಡಿ ತಂದವೆ.

3ನೇ ಕೂಸು : ಹಾಂ... ಅಪ್ಪ ತಂದವೆನಾ?... ಇಲ್ಲೆ... ಇಲ್ಲೆ... ಎಲ್ಲಾ ಸುಳ್ಳು, ನಿನ್ನೆ ಅವು ಎಂತರೂ ತಾತ್ಲೆ.

ಸೌಧಾಮಿನಿ : ಇಂದ್ ಖಂಡಿತಾ ತಂದವೆ. ಅವು ಬಾಕನ ಮುಟ್ಟ ಏನಾರ್ ಆಡಿಕಂಡಿರಿ. ನೀವು ಜಾಣ ಮಕ್ಕ ತಾನೆ? ನನ್ನ ಮುದ್ದು ಕೂಸುಗ.. ಅಂಗಳ್ಲಿ ಆಡಿಕಂಡಿರಿ.

3ನೇ ಕೂಸು : ಆತ್ ಅವ್ವ ಆಡುವೆ, ಆದರೆ ಅಪ್ಪ ತಿಂಡಿ ತಾದು ನಿಗಂಟ್ ತಾನೆ?

ಸೌಧಾಮಿನಿ : ಖಂಡಿತಾ ತಂದವೆ, ನಾ ಸುಳ್ಳು ಹೇಳ್ನೆ ನಾ?

2ನೇ ಕೂಸು : ಆಗಲಿ ನಾವು ಆಡಿಕೆ ಹೋದವೆ. (ಎಲ್ಲಾ ಹೋದವೆ)

ಸೌಧಾಮಿನಿ : ಓ ದೇವ್ರೆ... ಕೃಷ್ಣಾ... ಕೃಷ್ಣಾ! ನೀ ಹಿಂದೆ ದ್ರೌಪದಿನ ಮರ್ದ್ ಕೇಳಿ ಅದರ ಮಾನ ಕಾಪಾಡ್ದ ಗಡ. ಭಕ್ತ ಪ್ರಹ್ಲಾದನ ಭಕ್ತಿಗೆ ಮೆಚ್ಚಿ ಕಂಬಂದ ಹುಟ್ಟಿ ಬಂದ್ ಅವನ ಕಾಪಾಡ್ದ ಗಡ. ಹೀಂಗಿರ್ಕನ ಈ ಬಡೆ ಹೆಂಗ್ಸ್‌ನ ಕಾಪಾಡಿಕಿಲ್ಲೆನಾ? ನಾ ಸೆರ್‌ಂಗೊಡ್ಡಿ

ಬೇಡ್ತಾ ಒಳೆ, ಮಕ್ಕಳ ಸಂಕಟನ ನಂಗೆ ನೋಡಿಕೆ ಬೊತ್ತು ಅವು ಹೊರೆಗೆ ಹೋಗೊಳೊ, ಇನ್ನೂ ಬಾತ್ಲೆ, ಅವಾದರೂ ಏನ್ ಮಾಡ್ದು. ನಾವುಗೆ ನೀನೇ ದಿಕ್ಕ್. ನೀನೇ ನಮ್ಮ ಕಾಪಾಡೊಕು.

## ದೃಸ್ಯ – 2

### ಬೀದಿ

ಸುಧಾಮ : (ಬೆರಿ ಕೈಲಿ ಬಂದದೆ) ಹೇ ಕೃಷ್ಣಾ! ದೀನ ರಕ್ಷಕಾ... ಬಡವರ ಬಂಧು. ಈ ಬಡವನ ಕಸ್ಟ ನಿಂಗೆ ಕಾಂಬೊದುಲ್ಲೆನಾ? ನೊಂದಲ್ಲಿಗೆ ನೋವು, ಬೆಂದಲ್ಲಿಗೆ ಬೇನೆ, ಹುಣ್ಣುನ ಮೇಲೆ ಬರೆಂತ ಹೇಳುವಾಂಗೆ ಬಡತನಂದ ನನ್ನ ಹೊಟ್ಟೆ ತುಂಬ್ಸಿಕೇ ಆಗದ ನಂಗೆ ಮಕ್ಕಳ ಬೇರೆ ಕೊಟ್ಟ್ ಯಾಕೆ ನನ್ನ ಕಂಗಾಲ್ ಮಾಡ್ತಾ ಒಳಾ? ನಿನ್ನೆಂದ ಉಪಾಸಲಿ ಪೇಚಾಡಿಕಂಡಿರುವ ಆ ಮಕ್ಕಳ ನಾ ಹೇಂಗೆ ಸಮಾದಾನ ಮಾಡ್ದು? ಅಪ್ಪಾ ಎಂತ ತಿಂಡಿ ತಂದೊಳಾ? ಕೊಡೂಂತ ಕೇಳ್ಕನಾ ಏನ್‌ಂತ ಹೇಳಲಿ? ಹೊಟ್ಟೆಗೆ ಏನೂ ಇಲ್ಲದೆ ಇರುವ ಮಕ್ಕಳ ಮೋರೆನ ನಾ ಹೇಂಗೆ ನೋಡಲಿ? ಓ ದೇವ್ರೆ ಸಿರಿ ಸಂಪತ್ತ್‌ಂದ ದೂರಾದ ಮೊನ್ಸಂಗೆ ಹರಿನ ಕೃಪೆನೂ ಸಿಕ್ಕಿಕಿಲ್ಲೆನೊ? ನೋಡ್ನೊ ನನ್ನ ಹಣೆ ಬರಕ್ಕೆ ಯಾರ್ನ ದೂರಿ ಏನ್ ಪ್ರೊಜನ. ಆ ಶ್ರೀಕೃಷ್ಣನ ಇಚ್ಛೆ ಹೇಂಗೋ ಹಾಂಗೇ ಆಗಲಿ. (ಹೋದೆ)

# ದೃಸ್ಯ – 3

## ಸುಧಾಮನ ಮನೆ

**(ಕೃಷ್ಣನ ಮೂರ್ತಿ ಹಕ್ಕಲೆ ಮಕ್ಕೆಲ್ಲಾ ಮಲ್ಗಿದ್ದವೆ,**
**ಸೌಧಾಮಿನಿ ದೇವ್ರ ಪ್ರಾರ್ಥನೆ ಮಾಡಿಕಂಡಿದ್ದದೆ. ಸುಧಾಮ ಬಂದದೆ)**

ಸೌಧಾಮಿನಿ : (ಎದ್ದ್) ಓ ರಾಯರೇ, ಏಕೆ ಬಂದ್ ಸುಮ್ಮನೆ ಒಳರಿ, ಕಣ್ಣೀರ್ ಯಾಕೆ? ಮಕ್ಕಳಿಗೆ ತಿಂಬಕೆ ಏನೂ ಸಿಕ್ಕಿತ್ಲೆನಾ?

ಸುಧಾಮ : ಸೌಧಾ... ಈ ಬಡವಂಗೆ ಯಾರ್ ದಯೆ ತೋರುವೆ? ಎಲ್ಲವೂ ದೂರ ಕಳ್ಸುವೆ, ಹೆಣ್ಣ್–ಮಕ್ಕಳ ಹೊಟ್ಟೆ ತುಂಬ್ಸಿಕೆ ಬೊತ್ತದ ನಾ ಈ ಲೋಕಲಿ ಇರಿಕೆ ಆಗದ್. ಎಲ್ಲಿ ಹೋದರೂ ಯಾರಕ್ಕಲೆ ಕೇಳ್ರೂ ಒಂದು ಕೆಲ್ಸನೂ ಇಲ್ಲೆ, ತಿಂಬಕೆನೂ ಸಿಕ್ಕಿತ್ಲೆ, ಥೂ ನನ್ನ ಜನ್ಮವೇ.

ಸೌಧಾಮಿನಿ : ಅಸ್ಟೊಂದು ಬೇಜಾರ್ ಮಾಡಿಕಂಬೇಡಿ, ತಾಳ್ಮೆ ತಕಣಿ. ಆದರೆ ಈ ಪೊಡಿ ಮಕ್ಕ ಹಿಂಬೊತ್ತುಹೊಟ್ಟೆ ಇಸಿದೆ ಗಂಜಿಕೊಡು, ತಿಂಡಿಕೊಡೂಂತ ಮರ್ಟ್ ಮರ್ಟ್ ಈಗ ಮಲ್ಗಿಯೊಳೊ. ಅಪ್ಪ ಬಂದ ಕೂಡ್ಲೇ ತಿಂಡಿ ಕೊಟ್ಟನೇಂತ ಹೇಳಿದ್ದೆ, ಈಗ ಎದ್ರ್ಕನ ನಾ ಎಂತದರ ಕೊಡೊಕು ಓ ದೇವ್ರೇ... ಕೃಷ್ಣಾ... ಕೃಷ್ಣಾ..

ಸುಧಾಮ : ಸೆರಿಯಾಗಿ ನೆನ್ಪುಮಾಡ್ದ. ಬಡತನಲಿ ಅಮೃತ ಕುಡಿಯೋದುಂತೇಳ್ರೆ ಕೃಷ್ಣಾ... ಕೃಷ್ಣಾ... ಕೃಷ್ಣಾ... ಂತ ದೇವ್ರ ನೆನೆದು ಒಂದೇ.

ಸೌಧಾಮಿನಿ : ರಾಯರೇ, ನೀವು ಹೇಳ್ದೇನೋ ಸೆರಿ, ಕೃಷ್ಣನ ಭಕ್ತಿ

ಮೋಕ್ಷಕ್ಕೆ ದಾರಿಯೇನೊ ಹೌದು. ಆದರೆ ಮಕ್ಕ ಹೊಟ್ಟೆ ಇಸಿಕಂಡ್ ಮಟ್ಕರ್ಂಡ್ ಇರ್ಕನ ನಮ್ಮ ಭಕ್ತಿಯೆಲ್ಲಾ ಹೊರ್ಟ್ ಹೋದೆ. ಹೂಂ ಏನ್ ಮಾಡ್ದು ನಾ ಆಚೆಮನೆಗೆ ಹೋಗಿ ಮಕ್ಕಳಿಗೆ ತಿಂಬಕೆ ಏನಾರ್ ಸಿಕ್ಕಿದೆನೋಂತ ಕೇಳಿ ನೋಡ್ನೆ(ಹೋದೆ)

ಸುಧಾಮ : ಸೌಧಾ... ನಿನ್ನಂತ ಹೆಣ್ಣ್ ಸಿಕ್ಕಿದ್ ನನ್ನ ಪುಣ್ಯ. (ಕೃಷ್ಣನ ಭಜನೆ ಮಾಡ್ದೆ) ಜೈ ಕೃಷ್ಣ... ಜೈ ಜೈ ಕೃಷ್ಣ. (ಸೌಧಾಮಿನಿ ಬಂದದೆ) ಸೌಧಾ... ಏನಾರ್ ಸಿಕ್ಕಿತಾ? ಅದೆಂತ ಕೈಲಿ?

ಸೌಧಾಮಿನಿ : ಸಿಕ್ಕಿತ್, ಒಂದು ಸೇರ್ನಸ್ಟ್ ಅವುಲಕ್ಕಿ ತಂದೊಳೆ.

ಸುಧಾಮ : ಬೊದ್ಕಿದೆ, ಮಕ್ಕ ಎದ್ದ್ಕನ ಅದರಾರ್ ಕೊಡಕ್ ದೇವ್ರೇ ..ಕೃಷ್ಣಾ. ಕೃಷ್ಣಾ... ನೀನೇ ಕಾಪಾಡ್ದ. (ಮಕ್ಕ ಎದ್ದವೆ)

1ನೇ ಕೂಸು : ಅವ್ವಾ... ಅಪ್ಪ ಬಂದೊಳೊ ಅಲ್ಲಾ? ...ತಿಂಡಿ ಕೊಡು.

2ನೇ ಕೂಸು : ಅವ್ವಾ ತಿಂಡಿ ಕೊಡ್ ಅವ್ವಾ. (ಮಕ್ಕಳಿಗೆ ಅವುಲಕ್ಕಿನ ಪಾಲ್ ಮಾಡಿ ಕೊಟ್ಟದೆ... ಮಕ್ಕ ಕುಸಿಲಿ ತಿಂದ್ ಕೊಣ್ಕಂಡ್ ಆಡಿಕೆ ಹೋದವೆ.)

ಸೌಧಾಮಿನಿ : ರಾಯರೇ, ನೀವು ಸಿಟ್ಟ್ ಮಾಡ್ದುಲ್ಲೇಂತಾದರೆ ನಾ ಒಂದು ಹೇಳ್ನೆ, ನೀವು ಶ್ರೀ ಕೃಷ್ಮ ಜೋಸ್ತೀಂತ ಹೇಳ್ತಿದ್ದರಿಯಲ್ಲಾ, ಅಂವ ದ್ವಾರಕೆಯ ರಾಜ., ಅಂವನ ಹಕ್ಕಲೆ ಹೋಗಿ ಬೇಡಿಕಂಡ್ರೆ ನಮ್ಮ ಕಸ್ಟ ಹೋಕಿಲೆನಾ ಶ್ರೀಕೃಷ್ಣ ಬಡವರ ಬಂಧು ತಾನೆ?

ಸುಧಾಮ : ನೀ ಹೇಳ್ದೇನೋ ಸೆರಿ, ಶ್ರೀಕೃಷ್ಣನ ದರ್ಶನಕ್ಕೆ ಹೋಕರೆ ಏನಾರ್ ಕಾಣಿಕೆ ತಕಂಡ್ ಹೋದು ಬೇಡನೊ? ನಾ ಎಂತರ ತಕಂಡ್ ಹೋದು?

ಸೌಧಾಮಿನಿ : ಅದಕ್ಕೇಕೆ ಚಿಂತೆ? ಇಲ್ಲೇ ಉಟ್ಟಲ್ಲಾ ಮಕ್ಕ ತಿಂದ್ ಒಳ್ದ ಅವುಲಕ್ಕಿ., ಇದರ್ನೇ ಕಟ್ಟಿಕೊಟ್ಟನೆ. ದೇವ್ರಿಗೆ ಭಕ್ತಿಂದ ಕೊಡುದು ಹಂಞ ಆದರೂ ಅದ್ ತುಂಬಾಂತ ಕಾಂಬೊದು. ಹೂವುನ ಬದ್ಲಿಗೆ ಹೂವುನ ಎಸ್ಳ್, ತಕಂಡ್ ಹೋಗಿ. (ಹರ್ದ ತುಂಡು ಸೀರೆಲಿ ಕಟ್ಟಿ ಕೊಟ್ಟದೆ)

ಸುಧಾಮ : (ತಕಂಡ್ ಕಿಂಕ್ನಡಿಲಿ ಇಸಿ) ಹೋಗಿ ಬನ್ನೆ ಸೌಧಾಮಿನಿ ಮನೆಕಡೆ ಲಾಯಿಕ್ ನೋಡಿಕಾ. ನಾ ಬಾಕನ ಮುಟ್ಟ ಒಂದೆರ್ಡ್ ದಿನ ಮಕ್ಕಳ ಹೇಂಗಾರ್ ಸಮದಾನ ಮಾಡಿಕಾ ಶ್ರೀಕೃಷ್ಣ ನಮ್ಮ ಕಾಪಾಡ್ದು.

# ದೃಸ್ಯ – 4

## ಬೀದಿ

ಸುಧಾಮ : ದ್ವಾರಕೆಗೆ ಹೊರ್ಟದೇನೊ ಆತ್., ಇನ್ನು ಒಳ್ದದ್ ಒಂದೇ ಹೋಗಿ ಶ್ರೀಕೃಷ್ಣನ ದರ್ಶನ ಮಾಡ್ದು. ದೇವ್ರು ನಮ್ಮ ಕಾಪಾಡ್ದು. ಅಂತೂ ಈ ಬಡತನಂದಾಗಿ ಬೇಡುವ ನೆವನಂದ ಪರಮಾತ್ಮ ಸ್ವರೂಪಾದ ಶ್ರೀಕೃಷ್ಣ ಸ್ವಾಮಿನ ದರ್ಶನ ಲಾಭ ನಂಗಿಂದ್ ಸಿಕ್ಕಿದೆ. ದೇವ್ರ ದರ್ಶನ ಭಾಗ್ಯಂದ ಹೆಚ್ಚಿಗೆ ನಂಗೇನ್ ಬೇಕು. ಅದೇ ನನ್ನ ಸೌಭಾಗ್ಯ. ದೇವಾ ಈ ಬಡವಂಗೆ ನಿನ್ನ ದಯೆ ತೋರ್ಸು. ಈ ಲೋಕದ ಬಂಧನಂದ ಮುಕ್ತಿ ಕೊಡು ಇದೇ ನನ್ನ ಆಸೆ... ಬೇಡಿಕೆ. (ಹೋದೆ)

ದ್ವಾರಕ ನಗರಕ್ಕೆ ಹೋದನೆ
ಶ್ರೀಕೃಷ್ಣನ ದರ್ಸನ ಮಾಡಿನೆ
ಪರಮ ಪುರುಸನ ಕೊಂಡಾಡಿನೆ ॥ದ್ವಾರಕ॥
ಪಾದ ಕಮಲನ ಪೂಜಿಸಿನೆ
ಮಂಗಳ ಮೂರ್ತಿನ ಕೊಂಡಾಡಿನೆ
ದೇವರ ದೇವಂಗೆ ಶರಣಾದನೆ ॥ದ್ವಾರಕ॥

# ದೃಸ್ಯ – 5

## ಶ್ರೀಕೃಷ್ಣನ ಅರಮನೆ

**(ಶ್ರೀಕೃಷ್ಣ ಸುಖ ಸಂತೋಸಲಿ ರುಕ್ಮಣಿ, ಸತ್ಯಭಾಮೆನ ಅತ್ತ ಇತ್ತ ಕುದ್ರಿಸಿಕಂಡ್ ಇದ್ದದೆ)**

ಶ್ರೀಕೃಷ್ಣ : ಇಂದ್ಯಾಕೊ ನನ್ನ ಮನ್ಸ್ ಏನೋಬಾರಿ ಕುಸಿಂದ ಇರುವಾಂಗೆ ಕಂಡದೆ. ಶುಭ ಸೂಚನೆನಾಂಗೆ ನನ್ನ ಬಲ್ದ ಕಣ್ಣ್ ತನ್ನಿಂದತಾನೇ ಹಾರ್ದೆ. ಕಾರಣ ಏನಾಗಿರ್ದು, ಎಂತ ಕುಸಿನ ಸುದ್ದಿ ಸಿಕ್ಕುದು?

ದ್ವಾರಪಾಲಕ : (ಬಂದದೆ) ತಮ್ಮ ಸನ್ನಿದಾನಕ್ಕೆ ಪ್ರಾರ್ಥನೆ ಸ್ವಾಮಿ, ಯಾರೋ ಒಬ್ಬ ಬಡ ಬ್ರಾಹ್ಮಣ ನಿಮ್ಮ ದರ್ಸನಕ್ಕಾಗಿ ಬಾಗ್ಲ್ ಲಿ ಕಾದ್ಕಂಡ್ ಉಟ್ಟು.

ಶ್ರೀಕೃಷ್ಣ : ಯಾರ್ ವಿಪ್ರೋತ್ತಮನಾ ಒಳಗೆ ಬಾಕೆ ಹೇಳ್.

ದ್ವಾರಪಾಲಕ : ಅಪ್ಪಣೆ ಸ್ವಾಮಿ. (ಹೋದೆ) (ಸುಧಾಮ ಬಂದದೆ, ಭಕ್ತಿಂದ ಕೈಮುಕ್ಕಂಡೇ ಬಂದದೆ)

ಸುಧಾಮ : ಜೈ ಶ್ರೀಕೃಷ್ಣ ದೇವ್ರೆ... ಜೈ ಜೈ(ಕೃಷ್ಣನ ಕಾಲಿಗೆ ಸಾಷ್ಟಾಂಗ ನಮಸ್ಕಾರ ಮಾಡಿಕೆ ನೋಡ್ದೆ)

ಶ್ರೀಕೃಷ್ಣ : (ಕೂಡ್ಲೇ ಎದ್ದ್) ಯಾರ್... ಸುಧಾಮ...(ಹಕ್ಕಲೆ

ಹೋಗಿ ತೊಬ್ಬಿಕಂಡ್) ನೀ ನನ್ನ ಕಾಲಿಗೆ ಬೀಳ್ದೋ. ಬೇಡ, ಬೇಡ. ನಾ ದ್ವಾರಕೆನ ರಾಜನಾದರೂ ಭಕ್ತರಾಧೀನಂತ ಹೇಳ್ದರ ಮರ್ತನಾ? (ಸಿಂಹಸನಲೇ ಕುದ್ರಿಸಿಕಂಡದೆ)

ಸುಧಾಮ : ಮುರಾರಿ, ನಾ ಇಂದ್ ಧನ್ಯ ಆದೆ. ನೀ ಭಕ್ತರಾಧೀನ, ಬಡವರ ಬಂಧೂಂತ ಹೇಳ್ದು ದೃಡಾತ್. ನನ್ನಂತ ನಿರ್ಗತಿಕ ಬೇಡಿ ತಿಂಬವಂಗೆ ರತ್ನ ಖಚಿತ ಸಿಂಹಾಸನಲಿ ಕುದ್ರುವ ಯೋಗನಾ?

ಶ್ರೀಕೃಷ್ಣ : ನಿನ್ನ ಹೊಗ್ಗಿಕೆ ಮಾತ್ನೆಲ್ಲಾ ಕಟ್ಟಿಸ್, ನಂಗೆ ಎಲ್ಲಾ ಗೊತ್ತುಟು. ರುಕ್ಮಿಣಿ, ಸತ್ಯಭಾಮೆಗಳೇ ಚಿನ್ನದ ಕಲಶಲಿ ಗಂಗೋದಕ ತನ್ನಿ, ಪ್ರಾಣಸ್ನೇಹಿತ ಆದ ಈ ವಿಪ್ರೋತ್ತಮನ ಪಾದನ ತೊಳ್ದ್ ಪುಣ್ಯ ಕಟ್ಟಿಕಣೊಕು. (ಹಂಗೇ ಮಾಡುವೆ, ಕೃಷ್ಣನೇ ಕಾಲ್ ತೊಳಿಯಕೆ ಹೊರ್ಟದೆ. ಸುಧಾಮ ಕೈ ಮುಕ್ಕಂಡ್ ಕಣ್ಣ್ ಮುಚ್ಚಿ ತನ್ನ ತಾನ್ ಮರ್ತದೆ) ಸುಧಾಮ ಸೌಖ್ಯನಾ? ನಿಂಗೆ ಮೊದುವೆ ಆಗುಟಾ?

ಸುಧಾಮ : ಎಲ್ಲಾ ತಿಳ್ದ ದೇವ್ರ್ ನೀ ಹೀಂಗೆ ಪ್ರಸ್ನೆ ಮಾಡ್ದೋ? ಸಂಸಾರ ಸಾಗಿಸಿಕೆ ಸುರು ಮಾಡಿ ಸುಮಾರ್ ವರ್ಸ ಆತ್.

ಶ್ರೀಕೃಷ್ಣ : ಹೌದಾ? ನೀ ನನ್ನ ಮೊದುವೆಗೆ ಕರ್ತೇ ಇಲ್ಲೆ. ಬಾರೀ ಜನ ನೀ. ಅದಿರ್ಲಿ ಮಕ್ಕಮೊರಿ ಆಗುಟಾ?

ಸುಧಾಮ : ಮಕ್ಕಳೋ ಕೃಷ್ಣ, ಮಕ್ಕಯೆಲ್ಲಾ ಮನೆ ತುಂಬಿ ನಿನ್ನ ದರ್ಸನಕ್ಕೆ ಬಂದದ್. ಅದಿರ್ಲಿ ಕೃಷ್ಣಾ ನೀ ಸೌಖ್ಯತಾನೆ? ನನ್ನ ಭಾಗ್ಯ ದೇವತೆ, ನಾ ಎಲ್ಲರೊಟ್ಟಿಗೆ ಕೇಳುವಾಂಗೆ ಸೌಖ್ಯನೋಂತ ಕೇಳ್ದೆ, ತಪ್ಪಾದರೆ ಕ್ಷಮ್ಸು.

ಶ್ರೀಕೃಷ್ಣ : ಅದರ್ಲಿ ತಪ್ಪೆಂತದ್, ನನ್ನ ಸಂಸಾರ ನೋಡ್ದ ತಾನೆ. ನೀ ಇಲ್ಲೇ ಕೆಲವು ದಿನ ಇದ್ದ್ ಎಲ್ಲಾ ನೋಡಿಕಂಡ್ ಹೋಗು. ಅದು ಬುಡು, ನೀ ಕೃಷ್ಣನ ದರ್ಸನಕ್ಕೆ ಬಂದಂವ ಕಾಣಿಕೆ ಏನೂ ತಾತ್ಲೆನಾ? ಅತ್ತಿಗೆ ಏನೂ ಕೊಡದಿರಿಕಿಲ್ಲೆ.

ಸುಧಾಮ : (ಸುಮ್ಮನೆ ಇದ್ದದೆ)

ಶ್ರೀಕೃಷ್ಣ : "ಮೌನಂ ಸಮ್ಮತಿ ಲಕ್ಷಣಂ" ಏನಾರ್ ತಂದಿರುವ, ಕೊಡು ಬೇಗ.

ಸುಧಾಮ : (ಹಿಂದೆ ಮುಂದೆ ನೋಡ್ದೆ)

ಶ್ರೀಕೃಷ್ಣ : ನಂಗೆ ಗೊತ್ತಿಲ್ಲೇಂತ ತಿಳ್ದ, ಕೊಡು ಇತ್ತ... ಬಾ...

ಸುಧಾಮ : (ಕೊಡಿಕೆ ನಾಚಿಕೆ ಆಗಿ ತಿರ್ಗಿ ನಿತ್ತದೆ, ಶ್ರೀಕೃಷ್ಣ ಅವನ ಹಕ್ಕಲೆ ಹೋಗಿ ಕಿಂಕಿನಡಿಂದ ಗಂಟ್ ನ ಎಳ್ಕಂಡದೆ)
ಕೃಷ್ಣಾ!... ಸ್ವಾಮಿ...

ಶ್ರೀಕೃಷ್ಣ : ಹೌದು ನನ್ನ ಎಲ್ಲವೂ ಹಂಗೆ ಕರ್ದವೆ, ಕೆಲವು ಜೆನ ತುಂಟ ಕೃಷ್ಣಂತ ಹೇಳುವೆ., ಗೊತ್ತಾತಾ? ಅಬ್ಬಾ. ಈಗ ಸಿಕ್ಕಿತ್ ನನ್ನ ಕಾಣಿಕೆ. (ಬಿಚ್ಚಿದೆ. ರುಕ್ಮಿಣಿ ಸತ್ಯಭಾಮೆ ನೆಗಾಡುವೆ)

ಸುಧಾಮ : ಕೃಷ್ಣಾ, ನಾನ ಬಿಚ್ಚಿ ಕೊಟ್ಟನೆ.

ಶ್ರೀಕೃಷ್ಣ : ಬೇಡ, ಬೇಡ ..ನಂಗೂ ಕೈ ಉಟ್ಟು, ನಾನೇ ಬಿಚ್ಚಿನೆ. (ಬಿಚ್ಚಿ ಒಂದು ಪುಂಡಿ ಅವುಲಕ್ಕಿ ತಕಂಡ್ ಕುಸಿಂದ ತಿಂದದೆ)

ರುಕ್ಮಿಣಿ : ಇದಕ್ಕೇ ನೀವುಗೆ "ತಿಂಡಿ ಪೋತ"ಂತ ಹೇಳ್ದು.

ಶ್ರೀಕೃಷ್ಣ : ಏನೇ ಎಸ್ಟ್ ತಮಾಸೆ ಮಾಡಿಯ? ನಿಂಗೇನ್ ಗೊತ್ತು ಅವುಲಕ್ಕಿನ ರುಚಿ, ಅದೂ ನನ್ನ ಜೋಸ್ತಿ ಪ್ರೀತಿಂದ ತಂದದ್ ಇಂದಾ...ಹಂಞ ತಿಂದ್ ನೋಡು. (ಹಂಞ ಕೊಟ್ಟದೆ)

ಸತ್ಯಭಾಮೆ : ಮತ್ತೆ ನಾ ಏನ್ ಮಾಡಿಯೊಳೆ? ನಂಗಿಲ್ಲೆನಾ?

(ಕೃಷ್ಣ ಅದಕ್ಕೂ ಹಂಞ ಕೊಟ್ಟದೆ)

ಶ್ರೀಕೃಷ್ಣ : ಆಹಾ... ಎಂತಾ ರುಚಿ. ಭಕ್ತಂಗ ಪ್ರೀತಿಂದ ತಂದ್ ಕೊಟ್ಟದ್... ಅವುಲಕ್ಕಿ ಆದರೂ ಪಂಚಭಕ್ಷ ಪರಮಾನ್ನಕಿಂತ ಹೆಚ್ಚಿ ರುಚಿಯುಟ್ಟು. ಇರ್ಲಿ ಸುಧಾಮ. ಹೋಗು ಮೀಯ್ದ್ ಬೇರೆ ಬಟ್ಟೆ ಹಾಕಂಡ್ ಉಂಡು ವಿಸ್ರಾಂತಿ ತಕಣನೊ.

ಸುಧಾಮ : ದೇವಾ... ನಿನ್ನ ಇಚ್ಛೆನಾಂಗೆ ಆಗಲಿ.

# ದೃಸ್ಯ – 6

## ಬೀದಿ

**(ಮಾದಣ್ಣ ಗೋಪಣ್ಣಂತೇಳುವ ದನ ಮೇಪತಂಗ ದ್ವಾರಕಾ ನಗರದ ಬೀದಿಲಿ ಕಂಡ್ ಕಂಡವೆ)**

ಮಾದಣ್ಣ : (ಮುಂದೆ ಜೋರುಲಿ ಹೋಕಂಡಿದ್ದ ಗೋಪಣ್ಣನ ಹಿಂದೆ ಕರ್ದದೆ) ಓಯ್ ಗೋಪಣ್ಣ ಏನಪ್ಪಾ ಅಸ್ಟ್ ಅಂಬೆರ್ಪು. ಹಂಞ ನಿಲ್ಲ್ ಮಾರಾಯಾ.

ಗೋಪಣ್ಣ : ಓಹೋ... ಮಾದಣ್ಣ, ನಾ ಹಿಂದೆ ನೋಡ್ತೇ ಇಲ್ಲೆ ಕಂಡಿದ್ದರೆ ನಿನ್ನ ಮಾತಾಡ್ಸದೆ ಹೋತಿದ್ದೆನಾ?

ಮಾದಣ್ಣ : ಈಗಾರ್ ನೋಡ್ದ ಅಲ್ಲಾ, ಇರ್ಲಿ ನೀ ಯಾಕಡೆ ಹೋಗಿದ್ದಾ?

ಗೋಪಣ್ಣ : ನಮ್ಮ ಉದ್ಯಾವನದ ಕಡೆಗೆ ಮಾರಾಯ.

ಮಾದಣ್ಣ : ಯಾಕೆ? ನಂಗೆ ಹೇಳಿಕಾಗದಾ?

ಗೋಪಣ್ಣ : ಅರೇ ಮಾದಣ್ಣ ನಿಂಗೆ ಹೇಳದೆ ಏನ್? ಅದಿರ್ಲಿ ನೀ ಯಾಕೆ ಇಲ್ಲೇ ನಿತ್ತ್ ಬುಟ್ಟಾ? ಕಲ್ಲ್ ನ

ಮೂರ್ತಿನಾಂಗೆ.

ಮಾದಣ್ಣ : ನಾ ಕಲ್ಲ್ ನ ಮೂರ್ತಿ ಆಗಿದ್ದರೆ, ನಿನ್ನ ಮಾತಾಡ್ಸ್ತಿದ್ದೆನಾ? ಅದ್ ಸಾಯ್ಲಿ, ನೀ ಏನ್ ಬಾರಿ ಅಂಬೆರ್ಪುರ್ಲಿ, ಬೊಳ್ಳಿ ತೆಗ್ದ್ ಬುಟ್ಟ ಹೋರಿನಾಂಗೆ ಹೋತಿದ್ದಾ?

ಗೋಪಣ್ಣ : ನೋಡು ನಮ್ಮ ಕೃಷ್ಣ ಸ್ವಾಮಿನ ನಂಟ ಒಬ್ಬ ಬಂದುಟುಯಾ, ಸುಧಾಮಂತ ಏನೋ ಅವನ ಹೆಸ್ರ್.

ಮಾದಣ್ಣ : ಹೂಂ... ಹೊವುದು ಹೌದು, ಸುಧಾಮನೆ, ಏನಾತ್ ಅವುಕೆ?

ಗೋಪಣ್ಣ : ನಮ್ಮ ಕೃಷ್ಣ ದೇವ್ರ ಗುಣವೋ... ಚಿನ್ನದಂತಾ ಗುಣ. ಏನ್ ಸತ್ಕಾರ ಏನ್ ಉಪಚಾರ?

ಮಾದಣ್ಣ : ಯಾರಿಗೆ ಉಪಚಾರ? ಯಾರಿಗೆ ಸತ್ಕಾರ? ಆ ಸುಧಾಮಂಗೆನೋ?

ಗೋಪಣ್ಣ : ಹೊವುದು ಮಾರಾಯ. ನಮ್ಮ ದ್ವಾರಕೆನ ಒಡೆಯ ಭಕ್ತಾರಾಧೀನಂತ ಹೇಳ್ದು ಸೆರಿ ಮಾರಾಯ. ಏನ್ ಊಟ? ಏನೆಲ್ಲಾ ಪಾಯ್ಸ ಗೀಯ್ಸ, ಭಕ್ಷ ಬೋಜ್ಯ?

ಮಾದಣ್ಣ : ನೀ ಲಾಯಿಕ್ಲಿ ಬಾಟ್ ಕಾಯಿ ಕುಟ್ಟಿ ಬಂದ ತಾನೆ?

ಗೋಪಣ್ಣ : ಹ... ಹ... ಹ... ಹೌದು ಮಾರಾಯ, ಇಲ್ಲಿ ನೋಡು. (ಕೈನ ಮೂಸಿಕೆ ತೋರ್ಸಿದೆ) ಏನ್ ಗಮ ಗಮ ಪೊರಿಮಳ?

ಮಾದಣ್ಣ : ಪುಣ್ಯವಂತ ಮಾರಾಯ ನೀ, ಅದಿರ್ಲಿ ನಿನ್ನ ಓಟ ಯಾವ ಕಡಗೋ?

ಗೋಪಣ್ಣ : ಇಂದ್ ಉದ್ಯಾನಕ್ಕೆ ಸ್ವಾಮಿ ಬಂದವೆ ಗಡ, ಅಲ್ಲಿಗೆ ನಮ್ಮ ಬಳಗದ ಎಲ್ಲಾ ಹೋಕು ತಾನೆ?

ಮಾದಣ್ಣ : ಸೆರಿ, ನಾನೂ ಬನ್ನೆ, ಎಲ್ಲವೂ ಸೇರಿ ಸಂತೋಸ ಪಡೊನೊ. ಅಲ್ಲಿಗೆ ರಾಮಣ್ಣ, ನೇಮಣ್ಣ ಸೋಮಣ್ಣ ಎಲ್ಲವೂ ಬಂದವೆ ತಾನೆ?

ಗೋಪಣ್ಣ : ಹೊವುದು ಎಲ್ಲವು ಬಂದವೆ ನಮ್ಮ ಸ್ವಾಮಿನ ಕಾಂಬಕೆ ಎಲ್ಲವೂ ಬಾದು.

ಮಾದಣ್ಣ : ಕೃಷ್ಣಾ... ಮುಕುಂದಾ... ಮುರಾರಿ ನಿನ್ನ ರೂಪ... ಎಸ್ಟ್ ಲಾಯಿಕ್ ದೇವಾ. (ಇಬ್ಬೊರೂ ಹೋದವೆ)

# ದೃಸ್ಯ – 7

## ಬೃಂದಾವನ

**(ಬೃಂದಾವನಲಿ ಗೋಪಿಕಾ ಸ್ತ್ರೀಯರ್ ನರ್ತನ ಮಾಡ್ವೆ.**
**ನರ್ತನ ಮುಗ್ದಾಕನ ಶ್ರೀಕೃಷ್ಣ ಸುಧಾಮ ಬಂದವೆ )**

ಶ್ರೀಕೃಷ್ಣ : ಸುಧಾಮ! ನಿನ್ನ ಒಡನಾಟಂದ ಇಂದ್ ನಂಗೆ ತುಂಬಾ ಕುಸಿಯಾಗ್ತಾ ಉಟ್ಟು, ನಿನ್ನಂತ ಸಾದು, ಸಜ್ಜನ ಜೋಸ್ತಿನ ಪಡ್ದ ನಾನೇ ಧನ್ಯ.

ಸುಧಾಮ : ಓ ಪರಮಾತ್ಮ! ಎಂತಾ ಮಾತ್ ಹೇಳಿಯಾ, ಮಹಾಮಯಿಮನಾದ ನೀ ನನ್ನ ಜೋಸ್ತಿಂದ ಧನ್ಯ ಆದೋ? ತಿಂಬಕೆ ಗೆತಿ ಇಲ್ಲದ ನಾಯೆಲ್ಲಿ ಪುಣ್ಯ ಪುರುಸಾದ ನೀ ಎಲ್ಲಿ. ನಿನ್ನ ಸನ್ನಿಧಾನಕ್ಕೆ ಬಂದ್ ನಾ ಪವಿತ್ರಾದೆ. ನಿನ್ನ ದರ್ಸನ ಪಡ್ದ ನಾ ದೊಡ್ಡ ಭಾಗ್ಯವಂತ.

ಶ್ರೀಕೃಷ್ಣ : ಪ್ರಾಣಸಖನೆ, ನಿನ್ನ ಹೊಗಳಾಟ ಅಲ್ಲಿರ್ಲಿ, ನಂಗೆ ಇಂದ್ ನಮ್ಮ ಮಕ್ಕಳಾಟದ ದಿನ ನೆನ್ಪಾದೆ. ನಮ್ಮ

ಗುರುಕುಲ ಪರಮ ಪೂಜ್ಯರಾದ ಸಾಂದೀಪ ಮುನಿಗಳ ಶಿಸ್ಯರಾಗಿ ನಾ ನೀ, ಬಲರಾಮ ಎಲ್ಲಾ ಒಡನಾಡಿ ಕಂಡ್ ವಿದ್ಯೆ ಕಲ್ತದ್. ನಿಂಗೆ ನೆನ್ಪು ಇಲ್ಲೆನಾ ನಮ್ಮ ಬಾಲ್ಯ ಒಡನಾಟ ಎಸ್ಟ್ ಕುಸಿಯಾಗಿ ಲಾಯಿಕ್ ಇತ್ತ್ಂತ.

ಸುಧಾಮ : ಕೃಷ್ಣ ಪರಮಾತ್ಮ, ಅಂದ್ನ ನೆನ್ಪು ಬಾಕನ ನನ್ನ ಹರ್ದಯ ಕುಸಿಲಿ ತುಂಬಿ ಬಂದದೆ. ಈ ಬಡಂವ ಸುಧಾಮನ ಅಸ್ಟೊಂದು ರೀತಿಲಿ ಸುದಾರ್ಣೆ ಮಾಡ್ತಿದ್ದ ನೀ.

ಶ್ರೀಕೃಷ್ಣ : ಅಂದರೆ ಈಗ ನಾ ಹಂಗಿಲ್ಲೆನಾ?

ಸುಧಾಮ : ಹಂಗಲ್ಲ ಶ್ರೀಕೃಷ್ಣ! ಅಂದ್ನ ಮಕ್ಕಳಾಟನೇ ಬೇರೆ, ಇಂದ್ ನೀ ದ್ವಾರಕನಾಥ, ನಾ ಬಡ ಬ್ರಾಹ್ಮಣ.

ಶ್ರೀಕೃಷ್ಣ : ಸುಧಾಮ ಹಾಂಗಿದ್ದ ಭಾವನೆ ನೀ ಎಂದೂ ಇಸಿಕಂಬೇಡ. ಇಂದೂ ನಾ ನಿನ್ನ ಆತ್ಮ ಸಖನೇ. ನೀ ದೂರಲಿದ್ದೆಂತಾದರೆ ನಾ ನಿನ್ನ ಮರ್ತೋಳೇಂತ ತಿಳಿಬೇಡ, ಭಕ್ತರ ಶಿಖಾಮಣಿ ಆದ ನಿನ್ನ ಭಕ್ತರ ಭಕ್ತನಾದ ನಾ ಮರ್ತನೆನಾ?

ಸುಧಾಮ : ಧನ್ಯ ನಾ ದೇವ. ನನ್ನಂತ ಬಡವನ ಮೇಲೆ ನೀ ಇಸ್ಟೊಂದು ಕನಿಕರ ಇಸಿಯೊಳಾಂತ ಆದ ಮೇಲೆ ಇದಕ್ಕಿಂತ ಹೆಚ್ಚಿಗೆ ನಂಗೇನ್ ಬೇಕು ದೇವಾ? ನನ್ನದೊಂದು ಬೇಡಿಕೆ ಉಟ್ಟು, ನಡ್ಸಿ ಕೊಟ್ಟಿಯಾ?

ಶ್ರೀಕೃಷ್ಣ : ಸದಾ ಸಿದ್ಧ... ಸುಧಾಮ, ಬೇಡಿಕೆ ಎಂತ ಹೇಳ್.

ಸುಧಾಮ : ಶ್ರೀಮನ್ನಾರಾಯಣನ ಅವತಾರದಂವ ಆದ ಶ್ರೀಕೃಷ್ಣಾ., ಮುರಾರಿ... ನಿನ್ನ ಪಾದ ಪೂಜೆ ಮಾಡಿಕೆ ಇಂದ್ ನಂಗೆ ಒಪ್ಪಿಗೆ ಕೊಡು. ಕಣ್ ತುಂಬಾ ನಿನ್ನ ಮೋಹನ ರೂಪನನೋಡಿ, ಮನ್ಸಿಗೆ

ತೃಪ್ತಿ ಆಗುವಸ್ಟ್ ನಿನ್ನ ಪಾವನ ನಾಮಗಳ ಹಾಡಿ,
ಕೈ ಬೊಚ್ಚುವಸ್ಟ್ ನಿನ್ನ ಪಾದ ಪೂಜೆ ಮಾಡಿ
ತಲೆಬಾಗಿ, ಪೂಜೆಮಾಡುವ ಭಾಗ್ಯನ ಕೊಡು
ಇದೇ ಈ ಬಡವನ ಬೇಡಿಕೆ.

ಶ್ರೀಕೃಷ್ಣ : (ನೋಡಿಕಂಡ್) ನಿನ್ನಿಸ್ಟದಾಂಗೆ ಆಗಲಿ. (ಆಸನದ ಮೇಲೆ ಕುದ್ದದೆ, ಸುಧಾಮ ಹೂಗಳ ನೀರ್ನ ತಂದ್ ಪಾದ ತೊಳ್ದ್ ತೀರ್ಥರ್ಂತ ಕುಡ್ದ್, ಹೂಗಳ ಅರ್ಪುಸಿ, ಕುಸಿಂದ ಕುಣ್ಕಂಡ್ ಹಾಡ್ದೆ. ಭಕ್ತ ಪರವಸನಾಗಿ)

**ಇದ್ ಎಂಥಾ ಭಾಗ್ಯವಯ್ಯಾ**
**ಹರಿನ ಪೂಜಿಸಿ । ಹರಿನ ಭಜಿಸುವ**
**ಹರಿ ಕೃಪೆನ ನಿಜದಿ ಪಡೆವಾ ॥ ಇದ್ ಎಂಥಾ ॥**
**ಹರಿ ನಾಮ ಜಪಲಿ ಮುಳ್ಗಿದ್ರ್ ತಾ**
**ಹರಿ ಸೇವೆಲಿ ದಿನಾ ಓಲಾಡ್ ತಾ**
**ಹರಿ ದಯೆನ ನಿಜಲಿ ಪಡಿವಾ ॥ ಇದ್ ಎಂಥಾ ॥**

# ದೃಸ್ಯ – 8

## ಬೀದಿ

**(ಮಾದಣ್ಣನು ಕುಚೇಲ ಉದ್ಯಾನಲಿ ಹೇಳ್ದ ಪದ್ಯನ ಹಾಡಿ, ಕೊಣ್ಕಂಡ್ ಆನಂದ ಪರವಸನಾಗಿ ನಿತ್ತ್ ಕಣ್ಮುಚ್ಚಿ ಹಾಡ್ದೆ. ಮತ್ತೊಂದು ಕಡೆ ಗೋಪಣ್ಣನೂ ಇದೇ ಪದ್ಯನ ಹಾಡಿಕಂಡ್ ಭಕ್ತಿಲಿ ಹಿಂದೆ ಹಿಂದೆ ಬಂದ್ ಮಾದಣ್ಣಂಗೆ ಡಿಕ್ಕಿ ಹೊಡ್ದದೆ ಇಬ್ಬೊರೂ ನೋಡಿಕಂಡ್.)**

ಮಾದಣ್ಣ : ಅರೆ ಗೋಪಣ್ಣ!
ಗೋಪಣ್ಣ : ಅರೆ ಮಾದಣ್ಣ!
ಮಾದಣ್ಣ : ಅಲ್ಲಾ ಗೋಪಣ್ಣ ಎಂತದ್ ಸುಧಾಮಣ್ಣನ ಭಕ್ತಿ!

ಗೋಪಣ್ಣ : ಎಲಾ ಇಂವನ ನೀ ಹೇಂಗೆ ಕಂಡಾ?

ಮಾದಣ್ಣ : ನಾ ತೋಟಲಿ ಅಡ್‌ಂಗಿ ಕಂಡೆ, ಅದಿರ್ಲಿ ನೀ ಹೇಂಗೆ ಕಂಡಾ?

ಗೋಪಣ್ಣ : ನಿನ್ನ ಹಾಂಗೇ.!

ಮಾದಣ್ಣ : ಓ ನೀ ದೊಡ್ಡ ಕದೀಮ ಮಾರಾಯ, ಮತ್ತೆ ನಂಗೇಕೆ ಕೇಳಿಯಾ?

ಗೋಪಣ್ಣ : ಎರಡು ಜೆನದ್ರೂ ಒಂದೇ ಮಾರಾಯ. ಅದಿರ್ಲಿ ನಿಜವಾಗಿ ನಾವಿಬ್ರೊಬ್ರೂ ಧನ್ಯರ್ ಮಾರಾಯ.

ಮಾದಣ್ಣ : ಅದ್ ಹೇಂಗೆ?

ಗೋಪಣ್ಣ : ಹೇಂಗೆತೇಳ್ರೆ ಶ್ರೀಕೃಷ್ಣನ ದರ್ಸನಕ್ಕಾಗಿ ಎಸ್ಟೊಂದು ಜೆನ ಈ ದ್ವಾರಕೆಗೆ ಬಂದವೆ, ನಾವು ಪುಣ್ಯಕ್ಕೆ ಯಾಗೊಳು ಕೃಷ್ಣನ ಹಕ್ಕಲೇ ಸೇವೆ ಮಾಡಿಕಂಡ್ ಇರ್ಕನ ನಮಿಗಿಂತ ಧನ್ಯರ್ ಯಾರ್ ಒಳೋ?

ಮಾದಣ್ಣ : ಸೆರಿ ನಿನ್ನ ಮಾತ್ ಸತ್ಯ. ಆದರೆ ನಾವೀಗ ನಮ್ಮ ಕೆಲ್ಸ ಬುಟ್ಟು ಇಲ್ಲಿ ಬೀದಿ ಅಲಿಯೊದು ಸೆರಿಯಲ್ಲ. ನಾವು ನಮ್ಮ ಕೆಲ್ಸಕ್ಕೆ ಪೋಯಿ. (ಹೋದವೆ)

## ದೃಸ್ಯ – 9

### ಅರಮನೆ

**(ರುಕ್ಮಿಣಿ, ಸತ್ಯಭಾಮೆ ಶ್ರೀಕೃಷ್ಣನೊಟ್ಟಿಗೆ ಕುದ್ದ್ ಕಂಡ್ ಇದ್ದವೆ, ಸುಧಾಮನೂ ಒಂದು ಕಡೆ ಕುದ್ದಿದದೆ)**

ಶ್ರೀಕೃಷ್ಣ : ಸುಧಾಮ, ನೀ ಇಲ್ಲಿಗೆ ಬಂದ್ ತುಂಬಾ ದಿನ ಆತಲ್ಲಾ?

ಸುಧಾಮ : ಹೊವುದು ಶ್ರೀಕೃಷ್ಣ, ನಿನ್ನೊಟ್ಟಿಗೆ ಇದ್ದರ್‌ಂದ ಕುಸಿ,

ಸಂತೋಸಲಿ ದಿನ ಹೋದ್ದೇ ಗೊತ್ತಾತ್ಲೆ.

ಶ್ರೀಕೃಷ್ಣ : ಅತ್ತಿಗೆ ಪಾಪ ಅಲ್ಲಿ ನಿನ್ನ ದಾರಿ ಕಾದ್ಕಂಡ್ ಇರುವೊ. ಮಕ್ಕ ಕೂಡಾ ನಿನ್ನ ಕಾದ್ಕಂಡಿರುವೊ. ಸಂಸಾರಿಯಾದ ನಿನ್ನ ಹೆಚ್ಚಿ ದಿನ ಇಲ್ಲಿ ನಿಲ್ಸಿಕೊಂಬೊದು ಸೆರಿಕಾಂಬೊದುಲ್ಲೆ.

ಸುಧಾಮ : ದೇವಾ! ನೀ ಸೆರಿಯಾಗಿಯೇ ಹೇಳ್ತಾ ಒಳ. ನಾ ಈಗಳೇ ಹೊರ್ಟನೆ, ಬಡ ಬ್ರಾಹ್ಮಣ ನಾದ ನಂಗೆ ನೀ ತೋರ್ಸಿದ ಪ್ರೀತಿ, ಉಪಚಾರಕ್ಕೆ ನಾ ಋಣಿ.

ಶ್ರೀಕೃಷ್ಣ : ಋಣದ ಮಾತೇನೂ ಬೇಡ, ಸುಧಾಮ ನೀ ಹಿಂಗೇ ಆಗಾಗ ಬಂದ್ಕಂಡ್ ಹೋಕಂಡ್ ಇರ್.

ರುಕ್ಮಿಣಿ : (ಕುಚೇಷ್ಟಗೆ) ಬಾಕನ ಹಂಞ ಅವುಲಕ್ಕಿನೂ ತಾಕೂ ಹೇಳಿ.

ಶ್ರೀಕೃಷ್ಣ : ಏನ್ ರುಕ್ಮಿಣಿ ನಿಂಗೂ ಅವುಲಕ್ಕಿನ ರುಚಿ ಹಿಡ್ತಾ?

ರುಕ್ಮಿಣಿ : ಹಾಂಗಲ್ಲ, ನಿಮ್ಮ ಹೊಟ್ಟಗೆ ಹಿಟ್ಟ್ ಕಮ್ಮಿ ಆದರೆ ಆ ಅವುಲಕ್ಕಿ ತಿಂದ್ ಹೊಟ್ಟೆ ತುಂಬ್ಸಿಕಣೀಂತ. (ನೆಗಾಡ್ದೆ)

ಶ್ರೀಕೃಷ್ಣ : ಸಾಕ್ ನಿನ್ನ ಕುಚೇಷ್ಟೆ, ಸುಧಾಮನ ಭಕ್ತಿನ ಮೈಮೆ ನಿಂಗೇನ್ ಗೊತ್ತುಟು?

ರುಕ್ಮಿಣಿ : ತಪ್ಪಾತ್ ಪತಿದೇವಾ.

ಶ್ರೀಕೃಷ್ಣ : ಸುಧಾಮ ಹೊರ್ಟ್ ನಿತ್ತೊಳನಾ?

ಸುಧಾಮ : ಹೊವುದು ದೇವಾ (ಕಾಲ್ ಹಿಡಿಯಕೆ ಹೋದೆ ಆಗ ಕೃಷ್ಣ ತಡ್ದ್ ಅವನ ಬುಜ ಹಿಡ್ದ್)

ಶ್ರೀಕೃಷ್ಣ : ಹೋಗಿ ಬಾ ಮಿತ್ರ, ನಿಂಗೆ ಒಳ್ಳೆದಾಗಲಿ.

ಸುಧಾಮ : ಅಮ್ಮಾ ಹೋಗಿ ಬನ್ನೆ (ರುಕ್ಮಿಣಿ ಸತ್ಯಭಾಮೆಗೆ)

ರುಕ್ಮಿಣಿ : ನಿಂಗೆ ದೇವ್ರು ಒಳ್ಳೆದ್ ಮಾಡಲಿ.

ಶ್ರೀಕೃಷ್ಣ : ಹಂಞ ನಿಲ್ಲ್ ಸುಧಾಮ, ನೀ ಈಗ ಹಾಕಂಡಿರುವ

ಒಳ್ಳೆ ಬೆಲೆ ಬಾಳುವ ಪೀತಾಂಬರ, ಒಡವೆಗಳ ಇಲ್ಲೇ ಬುಟ್ಟ್ ಹೋಗು. ದಾರ್ಲಿ ಕಳ್ಳಕಾಕರ ಹೆದ್ರಿಕೆ ಹೆಚ್ಚಾಗುಟ್ಟು. (ಹಿಂದೆನ ಗಂಟ್ ತರ್ಸಿ ಕೊಟ್ಟ್) ಇಂದಾ ನಿನ್ನ ಹಳೆ ಬಟ್ಟೆಗ ಇಲ್ಲಿಟು, ಅದರ ಹಾಕಂಡ್ ಹೋಗು. ಆ ಪೀತಾಂಬರ ಒಡವೆಗಳ ನಮ್ಮ ದಾಸಿಗಳ ಕೈಗೆ ಕೊಟ್ಟು ಬುಡು. (ಸುಧಾಮ ಹಂಗೆ ಮಾಡ್ನೇಂತ ಒಳೆಗೆ ಹೋದೆ) ನೋಡ್ದಾ ರುಕ್ಮಿಣಿ, ಸುಧಾಮನ ಮಾತ್ಲಿ ಎಸ್ಟ್ ಭಕ್ತಿ, ಭಾವ ತುಂಬಿ ಹರ್ದದೆ. ಬಡತನಂದ ಉಂಬಕೆ ಗೆತಿ ಇಲ್ಲದೆ ಸಹಾಯ ಕೇಳಿಕೆ ಬಂದಂವ ನಾಚಿಕೆಂದ ಏನೂ ಕೇಳದೆ ಹೋಗುಟ್ಟು, ಬಡವ ಆದರೂ ಎಸ್ಟ್ ಅಭಿಮಾನ, ಸುಸಂಸ್ಕೃತ ನಡವಳಿಕೆ.

ಸತ್ಯಭಾಮೆ : ಪಾಪ ಬಡತನದ ಬೇಗೆಂದ ನರಳಾಡ್ದು ಗೊತ್ತಿದ್ದೂ ನೀವು ಅಂವ ಹೋಕನ ಅಂವ ಹಾಕಂಡಿದ್ದ ಪೀತಾಂಬರ, ಒಡವೆಗಳೆಲ್ಲಾ ಬುಟ್ಟು ಹೋಗೂಂತ ಹೇಳ್ದರಿಯಲ್ಲಾ ಯಾಕೆ? ಭಕ್ತನ ಮೇಲೆ ದಯೆ ತೋರ್ಸಿಕೆ ಆತಿತ್ಲೆನಾ?

ಶ್ರೀಕೃಷ್ಣ : ಸತ್ಯಭಾಮಾ, ಅದಕ್ಕೂ ಕಾರಣ ಉಟ್ಟು, ಕೊಡುದುತಾದರೆ ಬೇಕಾದಸ್ಟ್ ಕೊಡೊಕು. ಈ ಪೀತಾಂಬರದ ಕ್ರಯ ಎಸ್ಟ್? ಅವುಕೆ ಎಸ್ಟ್ ದಿನ ಬಾದು?

ರುಕ್ಮಿಣಿ : ಸ್ವಾಮಿ, ಮನ್ಸ್ ಮಾಡ್ರೆ ಲೋಕನೇ ಕ್ಷಣಮಾತ್ರಲಿ ಬದ್ಲ್ ಸುವ ಸಾಮರ್ಥ್ಯ ಇರುವ ನೀವು "ಭಕ್ತ ವತ್ಸಲ" "ಬಡವರ ಬಂಧು"ಂತ ಎಲ್ಲಾ ಹೊಗ್ಳಿಕೆನ ಹೊತ್ತ್ ಭಕ್ತರ್ ಬೇಡ್ದರ ಕೊಡುವ ನೀವು ಸುಧಾಮನ ಬಡತನ ಪರಿಹರ್ಸಿಕೆ ಆಗದಾ?

ಶ್ರೀಕೃಷ್ಣ : ಖಂಡಿತಾ ಹಂಗೇ ಮಾಡ್ನೆ. ಅವನ ಮನೆ ಅರಮನೆಯಾದೆ, ಧನ, ಕನಕ, ವಜ್ರ ವೈಡೂರ್ಯಗಳ್ಂದ ತುಂಬಿ ಸುಖಭೋಗನ ಅವನ ಸಂಸಾರದವು ಅನುಬೊವ್ಸವೆ.

ರುಕ್ಮಿಣಿ,
ಸತ್ಯಭಾಮೆ : ಧನ್ಯ ಸುಧಾಮ, ನಿನ್ನ ಭಕ್ತಿ ಅಮೋಘವಾದ್ದ್.

# ದೃಸ್ಯ – 10

## ಬೀದಿ

**(ಸುಧಾಮ ಪದ್ಯ ಹಾಡಿಕಂಡ್ ಬರ್ತಾ ಇದ್ದದೆ)**

ಸುಧಾಮ : **ಕಂಡೇ... ಹರಿಯ ಕಂಡೇ ॥ ದೇವಾದಿ ದೇವಾ ॥**
**ಧನುಜಾರಿ ವಂದ್ಯ । ಧರಣೀಶನಾ...**
**ದಿವ್ಯ ಚರಣ ಯುಗನ ಕಂಡೇ...**
**ಪಾವನವಾತ್... ನನ್ನೀ ಜನ್ಮ ।**
**ಪುನೀತ ಆದೆ ಸ್ವಾಮಿನ ಕಂಡ್ ॥ಕಂಡೇ॥**
**ಬೇರೇನೂ ಬೇಡ... ಸಾಕ್ ಇದೇ ಅನಂತ ಭಾಗ್ಯ ॥ಕಂಡೇ॥**
ದೇವಾಧಿ ದೇವಾ! ಶ್ರೀಕೃಷ್ಣಾ ನಿನ್ನ ದಿವ್ಯ ದರ್ಸನಂದ ನಾ ಧನ್ಯ ಆದೆ. ನಿನ್ನ ಜೇನ್ನಂತ ಮಾತ್ಂದ ಕುಸಿ ಪಟ್ಟೆ. ನಿನ್ನ ಅತಿಥಿ ಸತ್ಕಾರಕ್ಕೆ ಚಿರಋಣಿಯಾದೆ. ಆದರೆ ನಾ ನಿನ್ನಲ್ಲಿಗೆ ಬಂದ ಉದ್ದೇಸನ ಮರ್ತೆ ಅಲ್ಲಾ. ಈಗ ಮನೆಗೆ ಹೋಕನ ನನ್ನ ಹೆಣ್ಣ್‌ಗೆ ಏನ್ ಹೇಳ್ದು. ಮಕ್ಕ ಓಡಿಕಂಡ್ ಬಂದ್ ಅಪ್ಪಾ ಏನ್ ತಂದೊಳರಿಂತ ಕೇಳ್ಕನ ಏನ್ಂತ ಹೇಳ್ಲಿ. ಹೇಂಗೆ

ಅವರೆಲ್ಲಾ ಸಮಾದಾನ ಮಾಡ್ದು. ಕೃಷ್ಣಾ ನೀ ಸರ್ವಜ್ಞನಾಗಿನೂ ನಾ ನಿನ್ನಲ್ಲಿಗೆ ಬಂದ ಉದ್ದೇಸ ತಿಳಿಯದಾತ? ನೀ ಭಕ್ತಾಧೀನ ಅಲ್ಲನಾ? ಭಕ್ತನ ಗೋಳು ನಿಂಗೆ ಗೊತ್ತಾತ್ಲೆನಾ? ಯಾರ್ನ ದೂರಿ ಏನ್ ಪ್ರಯೋಜನ? ಇದ್ ನನ್ನ ಪೂರ್ವಾರ್ಜಿತ ಫಲ, ನನ್ನ ಹಣೆಬರ. ದೇವ್ರ ಧ್ಯಾನ ಮಾತ್ರ ನನ್ನಲ್ಲಿ ಕಮ್ಮಿ ಆಗದಿರ್ಲಿ. ಭಕ್ತನಾದವಂಗೆ ಯಾವ ಗೊಡವೆನೂ ಇಲ್ಲೆಗಡ. ಎಲ್ಲನೂ ಭಕ್ತ ವತ್ಸಲನಾದ ಶ್ರೀಹರಿ ಕರುಣಿಸಿದೆ ಗಡ. ನಂಗೂ ಹಂಗೆನೇ... ನನ್ನ ಸರ್ವಸ್ವನೂ ನಿಂಗೆ ಅರ್ಪುಸುವೆ ಕೃಷ್ಣಾ. ನನ್ನ ಹೆಣ್ಣ್ ಮಕ್ಕ ಎಲ್ಲಾ ನಿನ್ನ ಅಧೀನ, ನನ್ನದ್‌ಂತ ಹೇಳ್ದು ಯಾವುದೂ ಇಲ್ಲೆ. ನಿನ್ನ ಧ್ಯಾನ ಮಾತ್ರ ನನ್ನ ಹರ್ದಯಲಿ ಯಾಗೊಳು ಇರ್ಲಿ. ಜೈ... ಶ್ರೀಕೃಷ್ಣಾ... ಜೈ... ಮುರಾರಿ... ಜೈ ಭಗವಾನ್. (ಹೋದೆ)

## ದೃಸ್ಯ – 11

### ಸುಧಾಮನ ಅರಮನೆ

**(ಸುಧಾಮ ಅರಮನೆ ಹಕ್ಕಲೆ ಬಂದದೆ, ಅವನ ಗುಡುಸ್ಲು ಕಾಣದೆ ತಬ್ಬಿಬ್ಬಾದೆ.)**

ಸುಧಾಮ : ಓ... ಏನಿದ್! ಊರಿಗೆ ಬಂದಂವ ದಾರಿ ತೊಪ್ಪಿ ವಾಪಾಸ್ ದ್ವಾರಕೆಗೆ ಬಂದೆನೊ? ಎಂತಾ ಭವ್ಯವಾದ ಅರಮನೆ ಛೆ... ಛೇ... ಎಂತಾ ಪೆದ್ದ ನಾ. ನನ್ನ ಯೋಚನೆ ಬರಲಿ ದಾರಿ ತೊಪ್ಪಿದೂ

ಗೊತ್ತಾತ್ಲೆ ಅಲ್ಲಾ?(ಹಿಂದೆ ಹೋಕೆ ನೋಡ್ಕನ ಸೌಧಾಮಿನಿ ಬಂದ್ ನಮಸ್ಕಾರ ಮಾಡ್ದೆ, ಸುಧಾಮ ಬೆರ್ಗಾಗಿ ಕಣ್ಣ್ ಬಾಯಿ ಬುಟ್ಟ್ ನೋಡ್ದೆ)

ಸೌಧಾಮಿನಿ : ಪತಿ ದೇವಾ, ಇದೇನ್ ಮನೆ ಬಾಗ್ಲಿಗೆ ಬಂದೊವು ಹಿಂದೆ ಹೋಕೆ ನೋಡ್ರೆ? ನಮ್ಮ ಮೇಲೆ ಕೋಪನಾ? ಒಳಗೆ ಬನ್ನಿ.

ಸುಧಾಮ : (ಬೆರ್ಗಾಗಿ) ಸೌಧಾಮಿನಿ ಏನಿದ್? ಬಾರಿ ಚೆನ್ನ ಬಣ್ಣ ಹಾಕಂಡ್ ಒಳಾ! ಎಲ್ಲಿಂದ? ಇದ್ ಯಾರ ಅರಮನೆ? ನೀ ಯಾಕೆ ಇಲ್ಲಿಗೆ ಬಂದೆ?

ಸೌಧಾಮಿನಿ : ಇದೇ ನಮ್ಮ ಮನೆ. ಇಂದ್ ಬೊಳ್ಪುಗೆ ನಿದ್ದೆಂದ ಎದ್ದ್ ನೋಡ್ಕನ ಹಿಂಗಾಗುಟ್ಟು. ನವರತ್ನ ಮೊದ್ಲಾದ ಎಲ್ಲಾ ಚಿನ್ನಭರಣಗ, ಪಡಿ ಪದಾರ್ಥಗ ಮನೆಲಿ ತುಂಬಿ ಹೋಗುಟ್ಟು. ಎಲ್ಲಾ ಆಸ್ಚರ್ಯ. ಭಗವಂತನ ಲೀಲೆ.

ಮಕ್ಕ : (ಓಡಿ ಬಂದ್) ಅಪ್ಪಾ... ಅಪ್ಪಾ! (ಸುತ್ತ ಮುತ್ತುವೆ, ಒಳ್ಳ ಉಡಿಗೆ ತೊಡಿಗೆ ಹಾಕಂಡ್ ಒಳೊ)

1ನೇ ಕೂಸು : ಅಪ್ಪಾ ಒಳೆಗೆ ಬನ್ನಿ, ನಮ್ಮ ಮನೆ ಎಸ್ಟ್ ಪೊರ್ಲು ಉಟ್ಟು ನೋಡಿ.

2ನೇ ಕೂಸು : ಅಪ್ಪಾ ಇಲ್ಲಿ ನೋಡಿ, ನನ್ನ ಉಡಿಗೆ ತೊಡಿಗೆ ಎಸ್ಟ್ ಲಾಯಿಕ್ ಉಟ್ಟು!

3ನೇ ಕೂಸು : ತಿಂಡಿ ತಿನ್ಸ್ ಒಂದು ಕೋಣೆ ತುಂಬಾ ಉಟ್ಟು, ಏನ್ ಗಮ್ಮತ್ ನಾವುಗೆ.

ಸೌಧಾಮಿನಿ : ಪತಿದೇವಾ, ಹಿಂಗೇಕೆ ನೋಡ್ರೆ. ನಾ ನಿಮ್ಮ ಹೆಣ್ಣ್ ಸೌಧಾಮಿನಿ., ಇವು ನಮ್ಮ ಮಕ್ಕ. ಎಲ್ಲಾ ಆ ಶ್ರೀಕೃಷ್ಣನ ಲೀಲೆಂತ ಯಾಕೆ ತಿಳ್ಕಣಿಕೆ ಆಗದ್. ಸ್ವಾಮಿ ಬೇರೆನೂ ತಿಳ್ಕಂಬೇಡಿ. ಪರಮ ಭಕ್ತರಾದ

ನೀವುಗೆ ಶ್ರೀಕೃಷ್ಣ ದಯಪಾಲ್ಸಿದ ಸೌಭಾಗ್ಯ.

ಸುಧಾಮ : ಭಗವಂತಾ! ಭಕ್ತವತ್ಸಲಾ... ಕರುಣಾಸಿಂಧೋ... ನಿಂಗೆ ನಾ ಏನೂ ಹೇಳದ್ರೂ, ನಾ ಕನ್ಸ್ನಲ್ಲಿ ಗ್ರೇಸದ ಇಸ್ಟೊಂದು ಸೌಭಾಗ್ಯನ ದಯ ಪಾಲ್ಸಿದನಾ? ನಿನ್ನ ಹೇಂಗೆ ಕೊಂಡಾಡಲಿ?

ಸೌಧಾಮಿನಿ : ಮಕ್ಕಳೇ ನಾವುಗೆ ಈ ಎಲ್ಲಾ ಸೌಭಾಗ್ಯನ ದಯಪಾಲ್ಸಿದ ಆ ಶ್ರೀಕೃಷ್ಣನ ಮನಪೂರ್ವಕ ಧ್ಯಾನ ಮಾಡೊನೊ.

**ರಾಧೇ... ಶ್ಯಾಂ... .ರಾಧೇ... ಶ್ಯಾಂ**

**ರಾಧಾ ಮಾಧವ ಮೇಘ ಶ್ಯಾಂ**

**ಆದಿ ನಾರಾಯಣ ರಾಧೇ... ಶ್ಯಾಂ**

**ಅನಾದಿ ಪುರುಷ ಮೇಘ ಶ್ಯಾಂ**

**ವಾಸುದೇವ ಹರಿ ರಾಧೇ ಶ್ಯಾಂ ||ರಾಧೇ ಶ್ಯಾಂ||**

ಸುಧಾಮ : (ಪದ್ಯ ಹಾಡ್ದೆ)

**ದೇವಾಧಿ ದೇವಾ ಹೇ ಗೋಪಾಲ...**

**ತಾಳಿಕೆ ಬೊತ್ತು ಈ ಬಡತನನಾ ....//ದೇವಾಧಿ //**

**ತಂದೆನು ನೀನೆ ಬಂಧುನು ನೀನೇ**

**ಭೋಗ ಭಾಗ್ಯದ ನಿಧಿನೂ ನೀನೇ**

**ಹೆಣ್ಣ್ ಮಕ್ಕಳ ಸಾಂಕದೆ ಹೋದೆ**

**ಬೊದ್ಕೊಕು ನಾ ಯಾಕೆ ಈ ಭೂಮಿ ಮೇಲೆ ||ದೇವಾಧಿ||**

**ಮಕ್ಕಳ ಗೋಳು ಸಯಿಸುದು ಹೇಂಗೆ**

**ಹೆಣ್ಣ್ ನ ಮೋರೆ ನೋಡುದು ಹೇಂಗೆ**

**ಬದ್ ಕಿ ಇದ್ದ್ ಪ್ರೋಜನ ಏನ್**

**ಕಾಪಾಡ್ ದೇವಾ ಹೇ ಗೋಪಾಲ ||ದೇವಾಧಿ||**

*** ತೆರೆ ***

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಅಧ್ಯಕ್ಷರ್

**ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**

**ಸದಸ್ಯರ್**

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ

ಶ್ರೀಮತಿ ಸ್ಮಿತಾ ಅಮೃತರಾಜ್

ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ

ಶ್ರೀ ಧನಂಜಯ ಅಗೋಳಿಕಜೆ

ಶ್ರೀ ದಂಬೆಕೋಡಿ ಎಸ್. ಆನಂದ

ಡಾ. ಕೂಡಕಂಡಿ ದಯಾನಂದ

ಶ್ರೀ ಕುಸುಮಾಧರ ಎ.ಟಿ.

ಡಾ. ವಿಶ್ವನಾಥ ಬದಿಕಾನ

ಶ್ರೀ ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ

ಶ್ರೀ ಪುರುಷೋತ್ತಮ ಕಿರ್ಲಾಯ

ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು

ಶ್ರೀ ಕಿರಣ್ ಕುಂಬಳಚೇರಿ

ಶ್ರೀ ಭರತೇಶ ಅಲಸಂಡೆಮಜಲು

ರಿಜಿಸ್ಟ್ರಾರ್

**ಶ್ರೀ ಚಿನ್ನಸ್ವಾಮಿ**



ಶ್ರೀ ಪಿ.ಜಿ. ಅಂಬೆಕಲ್ ದ.ಕ. ಜಿಲ್ಲಾ ಸುಳ್ಯ ತಾಲೂಕು ಅಮರ ಮೂಡ್ನೂರು ಗ್ರಾಮದ ಪೈಲಾರ್‌ಲಿ ಹುಟ್ಟಿದವು. ಶ್ರೀಯುತರ್ ಕೊಡಗು ಜಿಲ್ಲೆನ ಚೆಟ್ಟಳ್ಳಿ ಪ್ರೌಢಸಾಲೆಲಿ ಮುಕ್ಯ ಶಿಕ್ಷಕರಾಗಿ ನಿವೃತ್ತರಾದವು. ಶಿಕ್ಷಕರಾಗಿರ್‌ಕನೇ ಸಾಹಿತ್ಯ ಮತ್ತೆ ನಾಟಕಗಳ್ಲಿ ತೊಡಗಿಸಿಕಂಡಿದ್ದ ಇವು ಕೊಡಗು ಲೇಕಕ ಮತ್ತು ಕಲಾವಿದರ ಬಳಗದ ಪ್ರದಾನ ಕಾರ್ಯದರ್ಶಿಯಾಗಿ, ಜಿಲ್ಲಾ ಸಂಚಾಲಕರಾಗಿ, ಕಾರ್ಯಾಧ್ಯಕ್ಷರಾಗಿ, ಕೊಡಗು ಜಿಲ್ಲಾ ಪ.ಪೂ. ಕಾಲೇಜುಗಳ ಪ್ರಾಂಶುಪಾಲರ ಮತ್ತು ಪ್ರೌಢಶಾಲಾ ಮುಖ್ಯಶಿಕ್ಷಕರ ಸಂಗದ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದವು. ನಾಟಕಗಳ್ಲಿ ಆಸಕ್ತರಾಗಿದ್ದ ಇವು ನಟನಾಗಿ ನಿರ್ದೇಶಕನಾಗಿ ತೊಡಗಿಸಿಕೊಂಡವು. ಸಾಲೆನ ಸಹಾಯಾರ್ತ ನಾಟಕಗಳ್‌ಲಿ, ಸಾರ್ವಜನಿಕ ಗಣೇಶೋತ್ಸವದ ನಾಟಕಗಳ್ಲಿ ಮುಖ್ಯ ಪಾತ್ರ ಮಾಡಿ ಜನಮೆಚ್ಚುಗೆ ಪಡ್ದವು.

ಇವರ ಲೇಕನ, ಕತೆಗ ಜಿಲ್ಲಾ ಮತ್ತೆ ರಾಜ್ಯ ಮಟ್ಟದ ಪತ್ರಿಕೆಗಳ್‌ಲಿ, ಸ್ಮರಣ ಸಂಚಿಕೆಗಳ್‌ಲಿ ಪ್ರಕಟ ಆಗುಟು. ಹಲವು ಸ್ಮರಣ ಸಂಚಿಕೆಗಳ ಸಂಪಾದಕ ಮಂಡಳಿನ ಸದಸ್ಯರಾಗಿ, ಸಂಪಾದಕರಾಗಿ, ಪ್ರದಾನ ಸಂಪಾದಕರಾಗಿ ಕಾರ್ಯನಿರ್ವಹಿಸಿಯೊಳೊ. ಕೊಡಗು ವಿದ್ಯಾ ಇಲಾಕೆನ ಉದ್ಯೋಗಸ್ತರ ಸಹಕಾರ ಸಂಗದ ಅಮೃತ ಮಹೋತ್ಸವ ಸ್ಮರಣ ಸಂಚಿಕೆ 'ಸಹಕೃತಿ'ನ ಸಂಪಾದಕರಾಗಿದ್ದೊ. ಇವರ 'ತಬ್ಲಿ ಮಂಜ' ಅರೆಬಾಸೆ ಕತಾಸಂಕಲನ ಮತ್ತೆ 'ನಿನ್ನ ಪ್ರೇಮದ ಪರಿಯ' ಕನ್ನಡ ಕತಾಸಂಕಲನ ಪ್ರಕಟ ಆಗುಟು.

2020ರ್‌ಲಿ ನಡ್ದ ಎರಡ್ನೇ ಅರೆಬಾಸೆ ಸಾಹಿತ್ಯ ಸಮ್ಮೇಳನಲಿ ಸಾಹಿತ್ಯ ಕ್ಷೇತ್ರಲಿ ಇವರ ಸನ್ಮಾನಿಸಿಯೊಳೊ. 2021ರ್‌ಲಿ ದ.ಕ. ಜಿಲ್ಲಾ 24ನೇ ಸಾಹಿತ್ಯ ಸಮ್ಮೇಳನಲಿ ಶಿಕ್ಷಣ ಮತ್ತೆ ಸಾಹಿತ್ಯ ಕ್ಷೇತ್ರಲಿ ಶ್ರೀಯುತರಿಗೆ ಸನ್ಮಾನದ ಗೌರವ ಸಿಕ್ಕಿಟು.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಮಡಿಕೇರಿ ರೂ. 100